# ಕನ್ನಡದ ದಾರಿ






ಅ. ನ. ಕೃಷ್ಣರಾಯ.

# ಕನ್ನಡದ ದಾರಿ



ಅ. ನ. ಕೃಷ್ಣರಾಯ



[ಕರ್ನಾಟಕದ ಶಿಕ್ಷಣ, ಕಲೆ, ಸಂಸ್ಕೃತಿ, ಸಾಹಿತ್ಯ,
ಜನಪದಗಳಿಗೆ ಸಂಬಂಧಪಟ್ಟ ಸಮಸ್ಯೆಗಳ ವಿಮರ್ಶೆ.]



ಪ್ರಕಾಶಕರು :

ಪ್ರಗತಿಶೀಲ ಲೇಖಕರ ಸಂಘ,

ಬೆಂಗಳೂರು ನಗರ.

# ಮುನ್ನುಡಿ

ಈ ಏಳೆಂಟು ವರ್ಷಗಳಿಂದ ಕನ್ನಡಕ್ಕೆ ಸಂಬಂಧಪಟ್ಟ ಹಲವು ಸಮಸ್ಯೆಗಳ ಬಗ್ಗೆ ನಾನು ಪತ್ರಿಕೆಗಳಿಗೆ ಬರೆದ ಲೇಖನಗಳನ್ನು ಸಂಗ್ರಹಿಸಿ ಗ್ರಂಥರೂಪವಾಗಿ ಪ್ರಕಟಿಸಿದ್ದೇನೆ. ಈ ಗ್ರಂಥಕ್ಕಾಗಿಯೇ ಕೆಲವು ಹೊಸ ಲೇಖನಗಳನ್ನು ಬರೆದು ಕೂಡಿಸಿದ್ದಾಗಿದೆ. ಕನ್ನಡ ಚಳುವಳಿಯ ಸರ್ವತೋಮುಖ ವ್ಯಾಪ್ತಿ ಇದರಿಂದ ಸ್ವಲ್ಪ ಮಟ್ಟಿಗಾದರೂ ನಮ್ಮ ಜನಕ್ಕೆ ಪರಿಚಯವಾದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

"ಅನ್ನಪೂರ್ಣ" ಅ. ನ. ಕೃಷ್ಣರಾಯ

ವಿಶ್ವೇಶ್ವರಪುರಂ,

ಬೆಂಗಳೂರು ನಗರ.

೧೫—೨—೧೯೪೬.

# ಪರಿವಿಡಿ

———

# ಅ. ನ. ಕೃಷ್ಣರಾಯರ ಗ್ರಂಥಗಳು

**ಕಥೆ**

ಕಣ್ಣುಮುಚ್ಚಾಲೆ
ಪಾಪ-ಪುಣ್ಯ
ಕಾಮನ ಸೋಲು
ಜಾತಿಹೀನನ ಮನೆಯ ಜ್ಯೋತಿ
ಕಿಡಿ
ಮಿಂಚು

**ಕಾದಂಬರಿ**

ಜೀವನಯಾತ್ರೆ
ಉದಯರಾಗ
ಸಂಧ್ಯಾರಾಗ
ಮಂಗಳಸೂತ್ರ
ಸಾಹಿತ್ಯರತ್ನ
ನಟ ಸಾರ್ವಭೌಮ

**ಜೀವನ ಚರಿತ್ರೆ**

ಬಸವಣ್ಣನವರ ಅಮೃತವಾಣಿ
ಸ್ವಾಮಿ ವಿವೇಕಾನಂದ

**ಸಂಪಾದಿತ**

ಮರುಳಸಿದ್ಧೇಶ್ವರ ಕಾವ್ಯ

**ಇತರ**

ನನ್ನನ್ನು ನಾನೇ ಕಂಡೆ

**ಪ್ರಬಂಧ**

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸ ಹುಟ್ಟು
ರಾಜಾ ರವಿವರ್ಮ
ಸಾಹಿತ್ಯ ಮತ್ತು ಜೀವನ
ಕನ್ನಡದ ದಾರಿ

**ನಾಟಕ**

ಮದುವೆಯೋ-ಮನೆಹಾಳೋ
ಆಹುತಿ
ಆದದ್ದೇನು
ಗೋಮುಖವ್ಯಾಘ್ರ
ಎರಡು ನಾಟಕಗಳು
ಬಣ್ಣದ ಬೀಸಣಿಗೆ

**ಸಂಕಲನ**

ಪ್ರಣಯ ಗೀತಗಳು
ರಸಋಷಿ
ಕಾಮನ ಬಿಲ್ಲು
ಭಾರತೀಯ ಕಥಾಸಾಹಿತ್ಯ
ಪ್ರಗತಿಶೀಲ ಸಾಹಿತ್ಯ
ಮ್ಯಾಕ್ಸಿಂ ಗಾರ್ಕಿ

**ಅಚ್ಚಿನಲ್ಲಿ**

ಪೊರಕೆ (ಹರಟೆಗಳು)
ಅಖಂಡ ಕರ್ನಾಟಕ (ಪ್ರಬಂಧ)
ಕರುಳಿನ ಕೂಗು (ಕಾದಂಬರಿ)
ಯುಗಪುರುಷ ಲೆನಿನ್ (ಜೀವನ ಚರಿತ್ರೆ)
ಭಗವದ್ಗೀತಾರ್ಥಸಾರ (ಸಂಪಾದಿತ)

# ಕನ್ನಡದ ದಾರಿ



## ೧. ಪರಿಷತ್ತಿನ ಸಂದೇಶ

ಕನ್ನಡ ಸಾಹಿತ್ಯ ಪರಿಷತ್ತಿನ ಸಂದೇಶವನ್ನು ತಮಗೆ ಬೀರುವ ಗುರುತರ ಕಾರ್ಯಭಾರವನ್ನು ನನ್ನ ಮೇಲೆ ಹೊರಸಿ ತಾವು ನನ್ನನ್ನು ಭೀರುವನ್ನಾಗಿ ಮಾಡಿದ್ದೀರಿ. ಇದು ನನಗಿಂತಲೂ ವಯಸ್ಸಿನಲ್ಲಿಯೂ, ಪಾಂಡಿತ್ಯದಲ್ಲಿಯೂ, ಸೇವೆಯಲ್ಲಿಯೂ ಹಿರಿಯರಾದವರಿಂದ ಮಾಡಲ್ಪಡ ಬೇಕಾದ ಕರ್ತವ್ಯ. ತಾಯಸೇವೆಗೆ ಶ್ರದ್ಧೆಯೇ ಮುಖ್ಯವೆಂದು ನಾನು ಭಾವಿಸಿರುವಂತೆ ತಾವೂ ಭಾವಿಸಿ ನನ್ನನ್ನು ಈ ಕಾರ್ಯನಿರ್ವಹಣಕ್ಕಾಗಿ ಆಹ್ವಾನಿಸಿರುವಿರೆಂದು ನಂಬಿದ್ದೇನೆ.

ನಮ್ಮ ಪರಿಷತ್ತು ದೈವಕೃಪೆಯಿಂದ ಬಾಲಾರಿಷ್ಟಗಳನ್ನು ಕಳೆದು ಇಂದು ತಾರುಣ್ಯಾವಸ್ಥೆಯಲ್ಲಿದೆಯೆಂದು ಧೈರ್ಯವಾಗಿ ಹೇಳಬಹುದು. ನಾವು ಹೆಮ್ಮೆ, ಪ್ರೇಮ, ಧೈರ್ಯಗಳಿಂದ ನಮ್ಮ ನಾಡ ನುಡಿಯ ಪ್ರತೀಕ ವಾದ ಪರಿಷತ್ತನ್ನು ನೋಡಬಹುದು. ನಮ್ಮ ಹಿರಿಯರ ಕನಸಿನ ಮೂರ್ತಿ ಇಂದು ನಮ್ಮ ಕನಸಿನ ಮೂರ್ತಿಯಾಗಿದೆ. ಅದನ್ನು ಕಟ್ಟಿ, ಬೆಳಸಿ, ದೇಶದ ಸಂಸ್ಕೃತಿಯ ಸಂಕೇತವನ್ನಾಗಿ ಮಾಡಿದ ಹಿರಿಯರ ಪುಣ್ಯ ನಾಮ ಸ್ಮರಣೆ ಮಾಡುವುದಕ್ಕೆ ಇದಕ್ಕಿಂತಲೂ ಉತ್ತಮ ಸನ್ನಿವೇಶ ಯಾವದು ?

ಪರಿಷತ್ತೆಂದರೆ ಬೆಂಗಳೂರಿನಲ್ಲಿ ಇರುವ ಕಟ್ಟಡವಲ್ಲ. ಅದರ ಹಿಂದಿ ರುವ ತ್ಯಾಗ, ಸೇವೆ, ಆತ್ಮಾರ್ಪಣ. ಪರಿಷತ್ತು ಬೆಂಗಳೂರಿನಲ್ಲಿದೆ ಯೆಂದು ಅದು ಮೈಸೂರಿನವರ ಸೊತ್ತಾಗಲಿಲ್ಲ. ಅದು ಎಲ್ಲ ಕನ್ನಡಿಗರ ಸೊತ್ತು. ಅದರ ಮೇಲೆ ಮೈಸೂರಿನವರಿಗೆ ಎಷ್ಟು ಸ್ವಾಮ್ಯವಿದೆಯೋ

---

೧೨-೨-೧೯೩೬ರಲ್ಲಿ ಮಡಿಕೇರಿಯ "ಕರ್ನಾಟಕ ಸಂಘ" ದಲ್ಲಿ ಮಾಡಿದ ಭಾಷಣದ ಸಾರಾಂಶ.

ನಿಮಗೂ ಇತರ ಎಲ್ಲ ಕನ್ನಡಿಗರಿಗೂ ಅಷ್ಟೇ ಇದೆ. ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿಯೂ ಮಿಡಿಯುತ್ತಿರುವ ಕನ್ನಡ ಭಾವನೆಯ ಕನ್ನಡ ಸಂಸ್ಕೃತಿಯ ಕುರುಹೆಂದು ತಾವು ಬೆಂಗಳೂರಿನಲ್ಲಿರುವ ಸಂಸ್ಥೆಯನ್ನು ಪರಿಗಣಿಸಬೇಕು.

ಇಪ್ಪತ್ತೈದು ವರ್ಷಗಳ ಹಿಂದಣ ಚಿತ್ರವನ್ನು ಸ್ಮೃತಿಪಥಕ್ಕೆ ತಂದುಕೊಳ್ಳಿ. ನಾನೂ ನನ್ನ ಸಮಕಾಲೀನರೂ। ಅಂಬೆಗಾಲಿಕ್ಕುತ್ತಿದ್ದ ಕಾಲ—ಕ್ರಿಸ್ತಪಾದ್ರಿಗಳು ಬರೆದುದೇ ಸಾಹಿತ್ಯವಾಗಿದ್ದ ಕಾಲ—ಇಂಗ್ಲೀಷಿನ ವಜ್ರದಂಡಕ್ಕೆ ಸಿಕ್ಕಿ ನಮ್ಮ ತಾಯ್ನುಡಿ ಪುಡಿಪುಡಿಯಾಗಿದ್ದ ಕಾಲ—ಆಗ ನಮ್ಮ ಹಿರಿಯರು ಸಾಹಿತ್ಯಪರಿಷತ್ತನ್ನು ಸ್ಥಾಪಿಸಿದರು. ಹೆಚ್. ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಪುಟ್ಟಣ್ಣಶೆಟ್ಟರು, ಎಂ. ಶಾಮರಾಯರು, ಎಸ್. ಜಿ. ನರಸಿಂಹಾಚಾರ್ಯರು, ಆರ್. ನರಸಿಂಹಾಚಾರ್ಯರು, ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ. ವೆಂಕಟಕೃಷ್ಣಯ್ಯನವರು, ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಮುದವೀಡು ಕೃಷ್ಣರಾಯರು, ಶಾಂತಕವಿಗಳು, ಪಂಜೆ ಮಂಗೇಶರಾಯರು, ಎಂ. ಎಣ್. ಕಾಮತರು, ರೊದ್ದ ಶ್ರೀನವಾಸರಾಯರು, ಹಳಕಟ್ಟಿಯವರು—ಇವರ ಸಾಹಸದಿಂದ ಪರಿಷತ್ತು ಸ್ಥಾಪಿತವಾಯಿತು. ಪಂಡಿತರು, ಪಾಮರರು, ಅರಸರು, ಸಾಮಾನ್ಯರು, ಶ್ರೀಮಂತರು, ಕಡುಬಡವರು ಎಲ್ಲರೂ ಅದರ ನೆರವಿಗೆ ನಿಂತರು. ಎಷ್ಟೇ ಆಘಾತಗಳು ಬಂದರೂ, ಏನೇ ಎಡರು ತೊಡರುಗಳು ಬಂದರೂ ಲಕ್ಷಿಸದೆ ನಮ್ಮ ತಾಯಿನುಡಿ ಬೆಳೆಯಿತು.

ನಮ್ಮ ಕನ್ನಡ ನಾಡಿನ ಸಮಸ್ಯೆಗಳೇನು? ನಮ್ಮ ಭಾಷೆಯಲ್ಲಿನ ತೊಡಕುಗಳು ಯಾವವು? ನಮ್ಮ ಜನ ಯಾವ ಯಾವ ಕಡೆ ಏನೇನು ಕೆಲಸಗಳನ್ನು ಮಾಡುತ್ತಿದ್ದಾರೆ ಎಂಬುದನ್ನು ಪರಿಷತ್ತು ಲಕ್ಷಿಸಿ ದೇಶದಲ್ಲೆಲ್ಲಾ ಕನ್ನಡದ ಮೇಲಣ ಪ್ರೇಮವನ್ನು ಬೆಳಸುತ್ತ ಬಂದಿತು. ಕನ್ನಡಿಗರಿಗೆ 'ಕನ್ನಡತನ'ವನ್ನು ಕಲಿಸುತ್ತ ಬಂದಿತು. ಪರಭಾಷೆ, ಪರಸಂಸ್ಕೃತಿ, ಪರಕೀಯರ ಆಚಾರವಿಚಾರಗಳಿಗೆ ಮರುಳಾಗಿದ್ದ ಕನ್ನಡ ನಾಡಿನ ಸರಳಜೀವಿಗಳಿಗೆ ಆತ್ಮಜ್ಞಾನವನ್ನುಂಟುಮಾಡಿಕೊಡುವ ಮಹತ್ಕಾರ್ಯವನ್ನು ಹಿರಿಯರು ನಿರ್ವಹಿಸಿದರು. ವರ್ಷಕ್ಕೊಮ್ಮೆಯಾದರೂ ಕನ್ನಡ

ನುಡಿಯ ಪ್ರೇಮಿಗಳನ್ನು ಒಂದುಕಡೆ ಕಲೆಹಾಕಿ ಪರಸ್ಪರ ವಿಚಾರ, ವಿಶ್ವಾಸ ವಿನಿಮಯಕ್ಕೆ ಅವಕಾಶವನ್ನು ಕಲ್ಪಿಸುತ್ತ ಬಂದರು. ಮಣ್ಣು ಮುಕ್ಕುತ್ತ ಬಿದ್ದಿದ್ದ ಕನ್ನಡ ಮಹಾಕವಿಗಳ ಕೃತಿಗಳನ್ನು ಶೋಧಿಸಿ ಕನ್ನಡ ಜನತೆಗೆ ನೀಡುತ್ತ ಬಂದರು. ಪಂಪಭಾರತ, ಪಂಪರಾಮಾಯಣ, ಚಾವುಂಡ ರಾಯ ಪುರಾಣ, ಶಬ್ದಮಣಿದರ್ಪಣಾದಿ ಗ್ರಂಥಗಳನ್ನೊಮ್ಮೆ ನೋಡಿದರೆ ಎಂತಹ ನಿಷ್ಕಾಮ ಸೇವೆ ನಡೆದಿದೆಯೆಂಬುದು ಗೊತ್ತಾಗುತ್ತದೆ.

ಪರಿಷತ್ತಿಗೆ ಸ್ವಂತ ಕಟ್ಟಡವಿಲ್ಲದೆ ಬಹು ತೊಂದರೆಯಾಗಿತ್ತು. ಆ ಕಡೆಗೆ ಅಂದಿನ ಹಿರಿಯರು ಹೆಚ್ಚು ಲಕ್ಷ್ಯ ಕೊಡಬೇಕಾಯಿತು. ತಾಯಿಗೆ ಮೊದಲು ಗುಡಿಸಲಾಗಬೇಕಾಗಿತ್ತು. ಕರ್ಪೂರ ಶ್ರೀನಿವಾಸರಾಯರೂ ಬೆಳ್ಳಾವೆ ವೆಂಕಟನಾರಾಯಣಪ್ಪನವರೂ ಪಟ್ಟ ಶ್ರಮ ವರ್ಣನಾತೀತ. ಇಂದ್ರಿಯ ಪರಿಪಾಟವೆಲ್ಲಾ ತಪ್ಪಿಹೋಗಿದೆ, ವೃದ್ಧಾಪ್ಯದಿಂದ ಜೀರ್ಣ ವಾದ ದೇಹ - ಕರ್ಪೂರ ಶ್ರೀನಿವಾಸರಾಯರ ಕೈಯಲ್ಲಿ ಪರಿಷನ್ಮಂದಿರದ ಶಂಕುಸ್ಥಾಪನೆ ಮಾಡಿಸಿದ ದಿನವನ್ನು ಹೇಗೆ ಮರೆಯಲಿ. ತೇಜಃಪುಂಜಿತ ವಾದ ಆ ಕರ್ಮಯೋಗಿಯ ಮುಖವನ್ನು ಅಂದು ನೋಡಬೇಕಾಗಿತ್ತು. ಕಣ್ಣಂಚಿನಲ್ಲಿ ಮಿಡಿದ ಶಾಂತಿ ತೃಪ್ತಿಗಳ ಎಳನಗೆಯನ್ನು ಕಂಡು ನನ್ನ ಜೀವ ತಣಿಯಿತು. ವೆಂಕಟನಾರಾಯಣಪ್ಪನವರ ಅಖಂಡ ಸೇವೆಯನ್ನು ಬಹಳ ಜನರರಿಯರು. ನಾವು ಗೆಳೆಯರು ಎರಡನೆಯ ಪ್ರದರ್ಶನ ಸಿನಿಮಾ ಮುಗಿಸಿಕೊಂಡು ಮನೆಗೆ ಹೋಗುತ್ತಿರುವಾಗ ಆ ಹಿರಿಯರು ಪರಿಷತ್ತಿನ ಕಟ್ಟಡವನ್ನು ಹೃದಯದಲ್ಲಿಯೇ ಕಟ್ಟುತ್ತಿದ್ದರು. ಇಟ್ಟಿಗೆಗಳ ಮೇಲೆ ಇಟ್ಟಿಗೆಗಳು ನಿಂತು ಕಟ್ಟಡ ಇಂದಿರುವಂತಾಗುವುದಕ್ಕೆ ಮುಂಚೆ ವೆಂಕಟ ನಾರಾಯಣಪ್ಪನವರ ಹೃದಯದಲ್ಲಿ ಎಷ್ಟು ಸಲ ಆ ಕಟ್ಟಡವೆದ್ದಿದೆ ಬಲ್ಲಿರಾ? ಪರಿಷತ್ತಿನೆ ಆಸ್ತಿಭಾರದ ಕೆಲಸವನ್ನು ಹಾಕಿ, ಕನ್ನಡ ನುಡಿಯ ಸೇವೆಗೆ ಬೇಕಾದ ಸಾಮಗ್ರಿಯಗಳನ್ನು ಒದಗಿಸಿದರು. ಅದನ್ನು ಸರಿಯಾಗಿ ವಿತರಣೆ ಯಾಗಿ ಉಪಯೋಗಿಸುವವರು ಬೇಕಿತ್ತು. ೧೯೩೩ ರಲ್ಲಿ ಹುಬ್ಬಳ್ಳಿ ಯಲ್ಲಿ ೧೯ ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನ ಸೇರಿದಾಗ ಅಂತಹ ಒಬ್ಬ ನಾಯಕ ಪರಿಷತ್ತಿಗೆ ದೊರೆತ. ೧೯೩೩ ರಿಂದ ೩೮ ರ ವರೆಗೆ ಐದು ವರ್ಷಕಾಲ ಡಿ. ವಿ. ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷರಾಗಿ

ಅದರ ಬಾಳನ್ನು ಹಿರಿದು ಮಾಡಿದರು. ಪರಿಷತ್ತಿನ ಪ್ರತಿಯೊಂದು ಕೆಲಸದಲ್ಲಿಯೂ ಸಿಸ್ತು, ಸೊಗಸುಗಳನ್ನು ತಂದು ತುಂಬಿದರು. ವಸಂತ ಸಾಹಿತ್ಯೋತ್ಸವ, ಗಮಕಕಲಾ ಶಿಕ್ಷಣ, ಸ್ಪರ್ಧೆಗಳು ಮೊದಲಾದ ಹೊಸ ಹೊಸ ಚಟುವಟಿಕೆಗಳನ್ನು ಆರಂಭಿಸಿ ಎಲ್ಲ ಬಗೆಯ ಜನರೂ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಲು ಅವಕಾಶವನ್ನು ಕಲ್ಪಿಸಿ ಕೊಟ್ಟರು. ಸಾರ್ವಜನಿಕ ಜೀವನದಲ್ಲಿಯೂ, ಸರ್ಕಾರದಲ್ಲಿಯೂ ಗುಂಡಪ್ಪನವರಿಗಿದ್ದ ಸ್ಥಾನದ ನೆರವೂ ಪರಿಷತ್ತಿಗೆ ದೊರೆಯಿತು. ಗುಂಡಪ್ಪನವರು ವಿರಮಿಸಲು ಈ ಎರಡು ವರ್ಷಗಳಿಂದ ಉಪಾಧ್ಯಕ್ಷರಾಗಿರುವ ಬಿ. ಎಂ. ಶ್ರೀಕಂಠಯ್ಯನವರು ಪರಿಷತ್ತಿನ ಸರ್ವತೋಮುಖವಾದ ಪ್ರಗತಿಗೆ ಹಗಲಿರುಳೂ ದುಡಿಯುತ್ತಿದ್ದಾರೆ. ಕನ್ನಡ ನಾಡಿನ ಎಲ್ಲ ಭಾಗಗಳನ್ನು ಸಂಚರಿಸಿ ಪರಿಷತ್ತಿನ ಹಣತೆಯನ್ನು ಹಂಚಿಬಂದಿದ್ದಾರೆ. ಕೊಡುಗೈಯ ಒಡೆಯರಾಗಿ ಪರಿಷತ್ತಿನ ಬರಿ ಬೊಕ್ಕಸವನ್ನು ತುಂಬುತ್ತಿದ್ದಾರೆ. ಕಾವ್ಯಾಭ್ಯಾಸಗಳಿಗೆ ತಮ್ಮ ಅಪಾರ ಪಾಂಡಿತ್ಯದ ರಸದೂಟವನ್ನು ನಿರ್ವಂಚನೆಯಿಂದ ಹಂಚುತಿದ್ದಾರೆ. ಶ್ರೀಯುವರ ತ್ಯಾಗ, ಪಾಂಡಿತ್ಯ, ಕನ್ನಡ ಪ್ರೇಮ—ಇವು ಪರಿಷತ್ತಿನ ವ್ಯಾಪ್ತಿಗೆ ಇಂಬುಕೊಟ್ಟಿವೆ. ಈ ಹಿರಿಯರೆಲ್ಲರ ಸೇವೆಯೇ "ಪರಿಷತ್ತಿನ ಸಂದೇಶ," ಇವರಂತೆ ನಾವೂ ನಮ್ಮ ಜನ್ಮಗಳನ್ನು ತಾಯಸೇವೆಯಲ್ಲಿ ಸಾರ್ಥಕಪಡಿಸಿಕೊಳ್ಳುವ ಸುಯೋಗ ದೊರೆಯಲಿ.

ನಮ್ಮ ಪರಿಷತ್ತು ಮಾಡಬೇಕಾದ ಕೆಲಸ ಬಹಳವಿದೆ. ಪ್ರತಿ ಮನೆಗೂ ಕನ್ನಡಜ್ಯೋತಿಯನ್ನು ನಾವು ಒಯ್ಯಬೇಕು. ಯಾರ ಹೃದಯದಲ್ಲಿ ತಿಳಿವಿನ ಬೆಳಕಿಲ್ಲವೋ, ಯಾರ ಹೃದಯವು ಕನ್ನಡ ಅಭಿಮಾನದಿಂದ ವಂಚಿತವಾಗಿದೆಯೋ, ಯಾರ ಹೃದಯದಲ್ಲಿ ಪರಭಾಷೆ ಸಂಸ್ಕೃತಿಗಳ ಮೋಹವೆಂಬ ರಾಕ್ಷಸನ ಕುಣಿತವಿದೆಯೋ ಅದನ್ನು ಹೋಗಲಾಡಿಸಿ ಕನ್ನಡ ತನಿರಸವೆನ್ನೆರೆಯುವುದು ನಮ್ಮ ಕರ್ತವ್ಯ. ನಮ್ಮ ಜನಕ್ಕೆ ಕನ್ನಡತನವನ್ನು ಇನ್ನೂ ನಾವು ತೋರಿಸಿಕೊಡಬೇಕಾಗಿದೆ. ಬದುಕಲು ಬಾಳಲು, ಹಿರಿಯ ಸ್ಥಾನಗಳನ್ನಡರಲು ಕನ್ನಡ ಬೇಕು. ಒಮ್ಮೆ ನಮ್ಮ ಜನ ದೊಡ್ಡವರಾದರೋ ಅವರು ಕನ್ನಡವನ್ನು ಮರೆತು ತಾವು ತೆಲುಗರೆಂದೊ, ಮರಾಟಿಗರೆಂದೋ, ತಮಿಳರೆಂದೋ ಹೇಳಿಕೊಳ್ಳುತ್ತಾರೆ.

ಕನ್ನಡವನ್ನು ಮನೆಯಲ್ಲಿ ಮಾತನಾಡುವುದು ಹೀನಾಯವೆಂದು ಭಾವಿಸುತ್ತಾರೆ. ಹಿಂದಿ, ಮರಾಟಿ ಸಾಹಿತ್ಯಗಳ ಮುಂದೆ ಕನ್ನಡವಿಲ್ಲ ಎಂದು ಡಂಗುರ ಸಾರಲಾರಂಭಿಸುತ್ತಾರೆ. ಸ್ವಭಾಷೆ, ಸಂಸ್ಕೃತಿಗಳ ದ್ರೋಹಿಗಳಾದ ಈ ನಮ್ಮ ಜನವೇ ನಮ್ಮ ಪರಮ ಶತ್ರುಗಳು ; ಇವರನ್ನು ನಿರ್ದಾಕ್ಷಿಣ್ಯದಿಂದ ಮೆಟ್ಟಬೇಕು. ಕನ್ನಡಿಗರು ರಸಿಕರು, ದಯಾಧನರು, ಸಾತ್ವಿಕರು—ನಿಜ, ಆದರೆ ಹೇಡಿಗಳಲ್ಲ! ವೀರರೂ ಆಗಿದ್ದಾರೆಂಬುದನ್ನು ಮರೆಯಬೇಡಿ. ನಮ್ಮಲ್ಲಿ ಪಂಪ, ರನ್ನ, ಹರಿಹರ, ಕುಮಾರವ್ಯಾಸಾದಿ ಕವಿಗಳಾಗಿ ಹೋದಂತೆ ತೈಲಪ, ಪುಲಕೇಶಿ, ಕೃಷ್ಣದೇವರಾಯ, ಚಿಕ್ಕದೇವರಾಜಾದಿ ವೀರರೂ ಆಗಿಹೋದದ್ದನ್ನು ಮರೆಯಬೇಡಿ. ಕಣ್ಣನೆತ್ತಿ ಹೊರಳಿಸಿ ನೋಡಿ—ನಮ್ಮ ವೀರರ ತಪೋಭೂಮಿಗಳನ್ನು ನೋಡಿ—ಹಂಪೆ, ಶ್ರೀರಂಗಪಟ್ಟಣ, ಕೊಡಗುಗಳಲ್ಲಿ ಕಾದಿ, ಮಡಿದು ಕೀರ್ತಿಕಾಯರಾಗಿರುವ ನಮ್ಮ ವೀರರನ್ನು ಸ್ಮರಿಸಿಕೊಳ್ಳಿ. ಕನ್ನಡಿಗರು ಕವನಕಲಿಗಳು ಹೇಗೋ ಹಾಗೆ ಕದನಕಲಿಗಳೂ ಆಗಿದ್ದಾರೆ. ಆದರೆ ಅವರನ್ನು ನಿರ್ವಿಣ್ಣತೆ, ನಿರಭಿಮಾನಗಳು ಬಾಧಿಸುತ್ತಿವೆ. ಜೀರ್ಣವಾದ ವಸ್ತ್ರಗಳನ್ನು ತ್ಯಜಿಸುವಂತೆ ನಮ್ಮ ನೈಚ್ಯಾನುಸಂಧಾನವನ್ನು ತೊರೆಯಬೇಕಾದ ಕಾಲ ಈಗ ಬಂದಿದೆ. ಕನ್ನಡ ಸೇವೆಗಾಗಿ ಕಲಿಗಳೇ ಸಿದ್ಧರಾಗಿ. ಹಿಂದೆ ನಾವು ಕಳೆದುಕೊಂಡ ರಾಜ್ಯಗಳನ್ನು ದೊರಕಿಸಬೇಕಾಗಿದೆ. ಕನ್ನಡ ನಾಡಿನ ಎಲ್ಲೆ ಗೋದಾವರಿಯಿಂದ ಕಾವೇರಿಯವರಿಗಿತ್ತೆಂಬುದನ್ನು ಮರೆಯಬೇಡಿ. ಆ ಎಲ್ಲೆಯನ್ನು ಮತ್ತೆ ಸ್ಥಾಪಿಸಿದಲ್ಲದೆ ನಮಗೆ ತೃಪ್ತಿಯಿಲ್ಲ, ಶಾಂತಿಯಿಲ್ಲ, ಮುಕ್ತಿಯಿಲ್ಲ.

ಕನ್ನಡ ನುಡಿ ೩–೩–೩೯

---

## ೨. ಕನ್ನಡ ಪ್ರಚಾರ

ಗುಬ್ಬಿ ತೋಟದಪ್ಪನವರ ಛತ್ರದಲ್ಲಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರು 'ಕನ್ನಡದ ಭವಿಷ್ಯ'ವೆಂಬ ವಿಚಾರ ಮಾಡಿದ ಭಾಷಣದಲ್ಲಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

“ಇಂದು ಭಾರತ ಭೂಮಿಗೆ ಒಂದು ದೇಶಭಾಷೆಯನ್ನು ದೊರಕಿಸಿಕೊಳ್ಳಬೇಕೆಂಬ ದೃಷ್ಟಿಯಿಂದ ಹಿಂದಿಯನ್ನು ಸರ್ವ ಭಾರತೀಯರು ಪೋಷಿಸಬೇಕೆಂದು ಕೋರಲಾಗಿದೆ. ನಾನಾ ಮೂಲೆಗಳಲ್ಲಿ ಪ್ರಚಾರಕರು ಹರಡಿಹೋಗಿ ವಿಶೇಷ ಕಾರ್ಯವನ್ನು ಮಾಡುತ್ತಿರುವರು. ಕರ್ಣಾಟಕ ದೇಶದಲ್ಲಿ ಅವರಿಗೆ ವಿಶೇಷ ಪ್ರೋತ್ಸಾಹವನ್ನು ಕೊಡುತ್ತಿದ್ದು, ಕರ್ನಾಟಕ ಭಾಷಾ ಪ್ರಚಾರಕ್ಕೆ ಲಕ್ಷ್ಯವನ್ನು ಕೊಡದಿರುವ ಮಹನೀಯರು ಅನೇಕರಿದ್ದಾರೆ. “ಮನೆಗೆ ಮಾರಿ, ಪರರಿಗುಪಕಾರಿ” ಎಂಬಂತೆ ಕರ್ಣಾಟಕೀಯರು ಅನೇಕರಿದ್ದು, ಕನ್ನಡದ ಏಳಿಗೆಗಾಗಿ ದುಡಿಯುವವರ, ಕನ್ನಡದ ಪ್ರಗತಿಯನ್ನು ಹಂಬಲಿಸುವ, ಸ್ವರ್ಣಯುಗವನ್ನು ಕನಸಿನಲ್ಲಿ ಕಾಣುವ ಹೃದಯವನ್ನು ನೋಯಿಸುವವರಾಗಿರುವರು. ಅವರೆಲ್ಲರೂ ತಿಳಿಯಬೇಕು. ಕನ್ನಡವು ಕನ್ನಡ ನಾಡಿಗೆ ಮೊದಲನೆಯದು, ಕನ್ನಡ ದೇವಿಯ ಪೂಜೆಯ ನಂತರವೇ ಇತರ ಭಾಷಾ ದೇವಿಯ ಪೂಜೆ. ಕನ್ನಡ ಸಾಹಿತ್ಯವು ಇಂದು ವಿಶೇಷ ಇಕ್ಕಟ್ಟುಗಳಿಗೆ ಸಿಲುಕಿ ಹೋಗಿದೆ. ನಾನಾ ದೃಷ್ಟಿಗಳಲ್ಲಿ ಹೊಡೆತಗಳು ಅದಕ್ಕೆ ಬೀಳುತ್ತಿವೆ. ಅವೆಲ್ಲವನ್ನೂ ತಡೆದು ದೇವಿಯು, ನಮ್ಮ ಒಲುಮೆಯ ದೇವಿಯು, ನಮ್ಮ ಸಹಾಯವನ್ನು ಅಪೇಕ್ಷಿಸುತ್ತಿರುವಳು. ಆಕೆಯನ್ನು ನಾವು ತೊರೆಯಬಾರದು. ವಿಶಾಲ ಭಾರತದ ದೃಷ್ಟಿಯಲ್ಲಿ, ದೇಶಭಾಷಾ ಬೆಳವಳಿಗೆಯ ಆಕಾಂಕ್ಷೆಯಲ್ಲಿ, ಕರ್ಣಾಟಕರಾದ ನಾವು ಕನ್ನಡ ನಾಡನ್ನೂ, ಕನ್ನಡ ಸಾಹಿತ್ಯವನ್ನೂ ಮರೆಯಬಾರದು. ಬೇರೆ ಬೇರೆ ಪ್ರಾಂತ್ಯಗಳಾದ ಬಂಗಾಳ, ಆಂಧ್ರ, ತಮಿಳು ಮುಂತಾದುವೂ ಬೇರೆ ಬೇರೆ ರಾಷ್ಟ್ರಗಳಾದ ಜರ್ಮನಿ, ಫ್ರಾನ್ಸು, ಇಟಲಿ ಮುಂತಾದುವೂ ತಮ್ಮ ನಾಡಿನ ಭಾಷೆಗಳನ್ನೇ ಮೊದಲು ಪ್ರೋತ್ಸಾಹಿಸುತ್ತಿವೆ. ಅವೆಲ್ಲವೂ ಸಾಮಾನ್ಯ ವ್ಯವಹಾರಕ್ಕೆ ಮಾತ್ರ ಮತ್ತೊಂದು ಭಾಷೆಯನ್ನು ಉಪಯೋಗಿಸಿಕೊಂಡು, ತಮ್ಮ ಮಕ್ಕಳ ಜ್ಞಾನ ವಿಕಾಸವನ್ನು ತಮ್ಮ ನಾಡಿನ ಭಾಷೆಯಲ್ಲಿಯೇ ನಡೆಸುತ್ತಿರುವುವು. ಅವೆಲ್ಲವೂ ನಮಗೆ ಎಚ್ಚರಿಕೆಯನ್ನು ಕೊಟ್ಟಿರುವುವು. ಅದನ್ನು ನಾವು ಸ್ಪಷ್ಟವಾಗಿ ಅರಿಯಬೇಕಾದುದು ನಮ್ಮ ಕರ್ತವ್ಯ.

ಕನ್ನಡ ನಾಡಿನಲ್ಲಿರುವ ಕನ್ನಡ ಪತ್ರಿಕೆಗಳೇ ಕನ್ನಡಕ್ಕೆ ವಿರೋಧ

ವಾಗಿ ಹೋಗಿರುವುವು. ಕನ್ನಡಕ್ಕೆ ಎಷ್ಟು ಪ್ರೋತ್ಸಾಹವನ್ನು ಅವು ಯುಕ್ತವಾಗಿ ಕೊಡಬಹುದೋ ಅಷ್ಟನ್ನು ಕೊಡುತ್ತಿಲ್ಲ. ಹಿಂದಿಗೆ ಕೊಡುತ್ತಿರುವಷ್ಟು ಪ್ರೋತ್ಸಾಹವನ್ನೂ ಕೊಡುತ್ತಿಲ್ಲ. ಮೇಲಾಗಿ ಅವು ಅಪಪ್ರಚಾರದಲ್ಲಿ ಬೇರೆ ಗಮನವೀಯುವಂತಿದೆ!"

ಕನ್ನಡದ ಹಿತವನ್ನು ಕೋರುವವರೆಲ್ಲರೂ ಈ ಮಾತುಗಳನ್ನು ಮನಃಪೂರ್ವಕವಾಗಿ ಒಪ್ಪುತ್ತಾರೆ. ಕನ್ನಡ ನಾಡಿನಲ್ಲಿ ಮೊದಲನೆಯ ಸ್ಥಾನ ಕನ್ನಡದ್ದು, ಉಳಿದ ಸ್ಥಾನಗಳು ಮಿಕ್ಕ ಭಾಷೆಗಳಿಗೆ ಸೇರಿದ್ದೆಂಬುದು ನಿರ್ವಿವಾದ. ಆದರೆ ಶ್ರೀಯುವರು ಕನ್ನಡ ಪ್ರಚಾರವನ್ನು ಹೇಗೆ ಮಾಡಬೇಕು; ಮನೆಮನೆಗೂ ಹಳ್ಳಿಹಳ್ಳಿಗೂ ಕನ್ನಡ ಸಂದೇಶವನ್ನು ಹೇಗೆ ಒಯ್ಯಬೇಕೆಂಬುದನ್ನು ತಿಳಿಸಿಲ್ಲ. ಕನ್ನಡಿಗರು ತಮ್ಮ ಕರ್ತವ್ಯವನ್ನು ನಿರ್ವಹಿಸದೆ ಹಿಂದಿ, ಸಂಸ್ಕೃತ ಪ್ರಚಾರಕರನ್ನು ಆಕ್ಷೇಪಿಸುವುದರ ನ್ಯಾಯವಾದ ನಮಗೆ ಗೋಚರವಾಗುವುದಿಲ್ಲ. ಪರಿಷತ್ತಿನಂತಹ ಸಂಸ್ಥೆಯು ಪ್ರಚಾರಕರನ್ನು ದೇಶದೇಶಗಳಿಗೆ, ಹಳ್ಳಿಹಳ್ಳಿಗಳಿಗೆ ಕಳುಹಿಸಿಕೊಡಬೇಕು. ಜನತೆ ಕಣ್ದೆರೆದು ಕನ್ನಡದ ಸೊಂಪನ್ನು ಕಾಣುವಂತೆ ಮಾಡಬೇಕಾದುದು ಕನ್ನಡ ಪ್ರೇಮಿಗಳ ಕರ್ತವ್ಯ.

ಕನ್ನಡ ಭಾಷಾಪ್ರೇಮಿಗಳು ಪರಿಷತ್ತಿನ ಶ್ವೇತಚ್ಛತ್ರದ ಕೆಳಗೆ ಒಂದುಗೂಡುವ ತನಕ ಕನ್ನಡಕ್ಕೆ ಮುಕ್ತಿಯಿಲ್ಲ. ಹಿರಿಕಿರಿಯ ಭಾಷಾ ಸೇವಕರು ತಮ್ಮ ವ್ಯಕ್ತಿ ಪ್ರತಿಷ್ಠೆಗಳನ್ನು ಒತ್ತಟ್ಟಿಗೆ ತಳ್ಳಿ ಪರಿಷತ್ತಿನ ದೀನ ಸೇವಕರಾಗಿ ಕನ್ನಡಕ್ಕೆ ದುಡಿಯಬೇಕು. ತಮ್ಮ ಸಂಸ್ಕೃತಿಯ ಬಲದಿಂದ ಕನ್ನಡ ಪ್ರಚಾರಕರು ಕನ್ನಡ ವಿರೋಧಿಗಳನ್ನು ಎದುರಿಸಬಹುದು.

ಪರಿಷತ್ತು ಕನ್ನಡ ಪ್ರೇಮಿಗಳ ಸಭೆಯೊಂದನ್ನು ಕೂಡಿಸಿ "ಕನ್ನಡ ಪ್ರಚಾರ"ಕ್ಕಾಗಿ ಕೈಗೊಳ್ಳಬೇಕಾದ ಕೆಲಸ ಕಾರ್ಯಗಳನ್ನು ಚರ್ಚಿಸುವುದೊಳ್ಳೆಯದು. ಇದರಿಂದ ಪರಸ್ಪರ ವಿಚಾರ ಅನುಭವಗಳ ವಿನಿಮಯಕ್ಕೆ ಅನುಕೂಲವಾಗುತ್ತದೆ. ಕನ್ನಡ ಪತ್ರಿಕಾಕರ್ತರ ವಿಚಾರವಾಗಿ ಶ್ರೀಯುವರು ಹೇಳಿರುವುದು ಸತ್ಯವಾದ, ಲಜ್ಜಾಸ್ಪದವಾದ ವಿಷಯ. ಕನ್ನಡದ ನೆರವಿಗೆ ಕನ್ನಡ ಪತ್ರಿಕೆಗಳೇ ನಿಲ್ಲದಿದ್ದರೆ ಉಳಿದವರು ಏತಕ್ಕೆ ನಿಲ್ಲುವರು? ಅಮೃತಬಜಾರ್ ಪತ್ರಿಕೆ, ಬಂಗಾಳೀ, ನವಾಕಾಲ್, ಕೇಸರಿ ಪತ್ರಿಕೆಗಳ

ಇತಿಹಾಸ ಕನ್ನಡ ಸಂಪಾದಕರಿಗೆ ಹೊಸದಲ್ಲ. ಆ ಜೀವನ, ಆ ಸಂಸ್ಕೃತಿ, ಆ ಐಕಮತ್ಯ ನಮ್ಮಲ್ಲಿ ಬೇಡವೇ? ಕನ್ನಡ ಸಂಸ್ಥೆಗಳು ತಪ್ಪಿ ನಡೆಯುತ್ತಿದ್ದರೆ ಅವುಗಳನ್ನು ತಿದ್ದುವ ಅಧಿಕಾರ ಪತ್ರಿಕಾಕರ್ತರಿಗಿದೆ. ಅವರು ಆ ಕೆಲಸವನ್ನು ಮಾಡಬೇಕು. ಆದರೆ ವೈಯಕ್ತಿಕ ಕಾರಣಗಳಿಗೋಸುಗ ಕನ್ನಡದ ಮೇಲೂ, ಅದರ ಸಂಸ್ಥೆಗಳ ಮೇಲೂ ಗದಾಪ್ರಹಾರ ಮಾಡಿದರೆ ಯಾರು ಮೆಚ್ಚುವರು?

ಪರಿಷತ್ತು ಕೇವಲ ಕನ್ನಡ ಸಾಹಿತಿಗಳದು ಮಾತ್ರವಲ್ಲವೆಂದು ನಾವು ಮತ್ತೊಮ್ಮೆ ಒತ್ತಿಯೊತ್ತಿ ಹೇಳುತ್ತೇವೆ. ಅದರಲ್ಲಿ ಕನ್ನಡದ ಸೇವೆಯನ್ನು ಮಾಡುವವರೆಲ್ಲರಿಗೂ ಸ್ಥಾನವಿದೆ. ಕನ್ನಡ ಜೀವನ ಸಂಸ್ಕೃತಿಯ, ಜನತೆಯ ಅಮೃತವಾಣಿಯೆಂದರೆ 'ಪರಿಷತ್ತು' ಅದನ್ನು ಬಲಪಡಿಸುವ ಕೆಲಸ ಕನ್ನಡ ಪತ್ರಿಕಾಕರ್ತರಿಗೂ ಸೇರಿದೆ, ಸಾಹಿತಿಗಳಿಗೂ ಸೇರಿದೆ, ಜನತೆಗೂ ಸೇರಿದೆ.

ವಿಶ್ವವಾಣಿ–ಸೆಪ್ಟೆಂಬರ್ ೩೬

---

# ೩. ಇಂಡಿಯಾ-ಚೀಣಾ ಬಾಂಧವ್ಯ

ಡಾ॥ ಎನ್॥ ಷಾ॥ರವರು ಘನ ವಿದ್ವಾಂಸರು, ವೇದಾಂತಿಗಳು. ಚೀಣಾ ದೇಶಕ್ಕೂ ಇಂಡಿಯಾ ದೇಶಕ್ಕೂ ಸಾಂಸ್ಕೃತಿಕ ಬಾಂಧವ್ಯವನ್ನು ಹೆಚ್ಚಿಸಬೇಕೆಂದು ತವಕಪಡುತ್ತಿದ್ದಾರೆ. ಅದಕ್ಕಾಗಿ ಅವರು ಶಾಂತಿನಿಕೇತನದಲ್ಲಿ ಒಂದು ಚೀಣಾ ಭವನವನ್ನು ಕಟ್ಟಲು ಪ್ರಾರಂಭಿಸಿದ್ದಾರೆ. ಈ ಭವನಕ್ಕಾಗಿ ಈಗಾಗಲೇ ೩೦,೦೦೦ ರೂ. ಗಳನ್ನು ಶೇಖರಿಸಿದ್ದಾರೆ. "ಚೀಣಾ ಭಾರತ ಸಂಸ್ಕೃತಿ ಸಂಘ" ಎಂಬ ಸಂಘ ಈ ಭವನದಲ್ಲಿರುವುದು. ಅಲ್ಲಿ ದೊಡ್ಡ ಗ್ರಂಥಸಂಗ್ರಹ ಇರುವುದು. ಈಗಾಗಲೆ ಚೀಣಾದ ದರ್ಶನ, ಇತಿಹಾಸ, ಸಾಹಿತ್ಯ, ಕಾವ್ಯ ಮೊದಲಾದುವುಗಳಿಗೆ ಸಂಬಂಧಪಟ್ಟ ಒಂದು ಲಕ್ಷ ಗ್ರಂಥಗಳನ್ನು ಡಾ॥ ಎನ್॥ ಷಾ॥ರವರು ಕಳುಹಿಸಿರುವರು. ಮತ್ತೊಂದು ಲಕ್ಷ ಗ್ರಂಥಗಳನ್ನು ಕಳುಹಿಸುವ ಆಲೋಚನೆ ಮಾಡಿದ್ದಾರೆ. ಈ ಸಂಘ

ದಲ್ಲಿ ಭಾರತೀಯರೂ, ಚೀಣರೂ ಇಬ್ಬರೂ ಸೇರಿ ಉಭಯ ಜನಾಂಗಗಳ ಸ್ನೇಹ ಬಾಂಧವ್ಯವನ್ನು ಹೆಚ್ಚಿಸಬೇಕು. ಚೀಣದ ಸಂಸ್ಕೃತಿಯನ್ನು ಭಾರತೀಯರೂ ಭಾರತೀಯ ಸಂಸ್ಕೃತಿಯನ್ನು ಚೀಣರೂ ವಾತ್ಸಲ್ಯದಿಂದ ಅಂಗೀಕರಿಸಬೇಕು. ಅಷ್ಟೆ ಅಲ್ಲದೆ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸ ಬೇಕು. ಇದೇ ತಾರ್ ಏರ್ ಷಾರ್‌ರವರ ಸಂಕಲ್ಪ.

ಚೀಣದ ರಾಷ್ಟ್ರೀಯ ಸರ್ಕಾರದಲ್ಲಿ ಅರ್ಥಶಾಸ್ತ್ರದ ಮಂತ್ರಿಗಳಾಗಿದ್ದ ಏರ್ ಯುಲುಫು ಎಂಬ ಪ್ರಖ್ಯಾತ ಬೌದ್ಧ ಸಾಹಿತಿಗಳು ರವೀಂದ್ರನಾಥ ಠಾಕೂರರಿಗೆ ಬಹುಮಾನವಾಗಿ ಬಹು ಪ್ರಾಚೀನ ಕಾಲಕ್ಕೆ ಸೇರಿದ ಒಂದು ತಾಮ್ರದ ಪದಕವೊಂದನ್ನು ಕಳುಹಿಸಿ ಕೊಟ್ಟಿದ್ದಾರೆ. ತಾರ್ ಏರ್ ಷಾರ್ ರವರು ಕೆಲವು ಕಾಲ ಇಲ್ಲಿಯೇ ಇದ್ದು ಚೀಣಾ ಭಾರತ ಸಂಸ್ಕೃತಿ ಸಂಘ ವನ್ನು ವ್ಯವಸ್ಥಿತವನ್ನಾಗಿ ಮಾಡಿ ತಮ್ಮ ದೇಶಕ್ಕೆ ಹಿಂತಿರುಗುವರು.

ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿರುವ ಈ ಸುದ್ದಿಯನ್ನು ನಾವು ಅತ್ಯಾದರದಿಂದ ಪ್ರಕಟಿಸುತ್ತೇವೆ. ಕಲ್ಕತ್ತೆಯ ವಿಶ್ವವಿದ್ಯಾನಿಲಯ ನಿಯೋಜಕರಾದ ಸರ್ ಅಶುತೋಷ್ ಮುಖರ್ಜಿಯವರೂ, ವಿಶ್ವಭಾರತಿ ವಿಶ್ವವಿದ್ಯಾನಿಲಯದ ನಿಯೋಜಕರಾದ ರವೀಂದ್ರನಾಥ ಠಾಕೂರರೂ ವಿಶ್ವ ಮೈತ್ರಿಯನ್ನು ಸಂಸ್ಕೃತಿಯ ಮೂಲಕ ಸಾಧಿಸುವುದಕ್ಕೆ ಬಹಳ ದುಡಿದಿದ್ದಾರೆ. ಶಾಂತಿನಿಕೇತನದಲ್ಲಿ ಈಗಾಗಲೇ ಪರ್ಷಿಯಾ, ಅರೇಬಿಯಾ, ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್, ಜಪಾನ್ ದೇಶೀಯ ಸಂಸ್ಕೃತಿಗಳ ಅಧ್ಯಯನಕ್ಕೆ ವ್ಯವಸ್ಥೆಯಾಗಿದೆ. ಚೀಣಾ ಸರ್ಕಾರದ ಈ ಸಹಕಾರ ಅಂತ ರ್ರಾಷ್ಟ್ರೀಯ ಸಂಸ್ಕೃತಿಯ ಪ್ರೇಮಿಗಳಿಗೆ ಆನಂದವನ್ನುಂಟುಮಾಡದಿರದು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ "ಕನ್ನಡ ಸಂಸ್ಕೃತಿ"ಗೆ ಒಂದು ಪ್ರತ್ಯೇಕವಾದ ಪೀಠವಿಲ್ಲ. ಬಾಲಕರ ಹಣೆಗಳಿಗೆ ಅಕ್ಷರ ಮುದ್ರೆಗಳನ್ನೊತ್ತಿ ಕಳುಹಿಸುವ ಕಾರ್ಯದ ಕಾಲ ಮುಗಿದಿದೆ. ವಿಶ್ವವಿದ್ಯಾನಿಲಯ ನೈಜ ವಾಗಿಯೂ, ವಿಶ್ವವಿದ್ಯೆಗಳ, ವಿಶ್ವಸಂಸ್ಕೃತಿಯ ಮಾತೃಮಂದಿರವಾಗಿರ ಬೇಕು. ಕನ್ನಡ ಸಂಸ್ಕೃತಿಯ ಪೀಠಗಳು ಮೈಸೂರು, ಮದರಾಸು, ಮುಂಬಯಿ, ಆಂಧ್ರ, ಉಸ್ಮಾನಿಯಾ ವಿಶ್ವವಿದ್ಯಾನಿಲಯಗಳಲ್ಲಿ ಅವಶ್ಯಕ ವಾಗಿ ಆಗಬೇಕು. ಕರ್ಣಾಟಕ ವಿಶ್ವವಿದ್ಯಾನಿಲಯದ ಚಳುವಳಿ

ಯಶಸ್ವಿಯಾಗಿದ್ದರೆ ಇದು ಕೇಂದ್ರೀಕರಿಸಿಕೊಂಡು ಸಾಧ್ಯವಾಗುತ್ತಿತ್ತು. ಆದರೆ ಅದರ ಅಭಾವವನ್ನು ಸಂಸ್ಕೃತಿಯ ಪೀಠಗಳನ್ನು ಬೇರೆಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಸ್ಥಾಪಿಸುವುದರ ಮೂಲಕ ನಿವಾರಿಸಬೇಕಾಗಿದೆ. ಕನ್ನಡ ನಾಡಿನ ವಿದ್ಯಾಪ್ರಸಾರಕರೂ, ಸಂಸ್ಕೃತಿಯ ಅಭಿಮಾನಿಗಳೂ, ಶ್ರೀಮಂತರೂ ಈ ಕಡೆಗೆ ಲಕ್ಷ್ಯ ಕೊಡುವರೆ?

ವಿಶ್ವವಾಣಿ–ಸೆಪ್ಟಂಬರ್ ೩೬.

———

## ೪. ದಿವಾನ ಸಾಹೇಬರವರ ಕನ್ನಡ ಪ್ರಚಾರ

ಮೈಸೂರಿನ ದಿವಾನ ಸಾಹೇಬರವರು ಇದೇ ತಿಂಗಳು ೧೮, ೧೯ನೆಯ ತಾರೀಖುಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರವಾಸಮಾಡಿ ಮೈಸೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ನಾನಾ ಮುಖವಾದ ಬಾಂಧವ್ಯವನ್ನು ಭದ್ರಗೊಳಿಸಿದಾರೆ. ಮೈಸೂರಿನ ದಿವಾನರವರು ಕರ್ನಾಟಕ ದೃಷ್ಟಿಯನ್ನು ಎತ್ತಿಹಿಡಿದು, ಕನ್ನಡಿಗರೆಲ್ಲರ ಆಸೆ ಆಶಯಗಳ ಒಮ್ಮೈಯನ್ನು ಪ್ರಸ್ತಾಪಿಸಿರುವುದು ಇದೇ ಮೊದಲೆಂದು ಕಾಣುತ್ತದೆ. ಅಧಿಕಾರಸ್ಥಾನದಿಂದ ಕರ್ನಾಟಕ ಏಕೀಕರಣ ತತ್ವಕ್ಕೆ ಮಾನ್ಯತೆ ಕೊಟ್ಟು ತಾವೇ ಅದರ ರಾಯಭಾರಿಗಳಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಚರಿಸಿದ ದಿವಾನ ಸಾಹೇಬರವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

"ಮಂಗಳೂರು ಎಂಬ ಹೆಸರಿಗೂ, ಬೆಂಗಳೂರು ಎಂಬ ಹೆಸರಿಗೂ ಧ್ವನಿಯಲ್ಲಿ ಬಹುಮಟ್ಟಿಗೆ ಸಾದೃಶ್ಯವಿರುವುದೇನೋ ನಿಜ; ಆದರೆ ಮಂಗಳೂರು ಇರುವ ಸ್ಥಳಕ್ಕೂ ಬೆಂಗಳೂರು ಇರುವ ಸ್ಥಳಕ್ಕೂ ಅಷ್ಟು ಸಾಮೀಪ್ಯವಿಲ್ಲವಲ್ಲಾ ಎಂದು ನನಗೆ ತೋರಿತು. ಮಂಗಳೂರಿನಲ್ಲಿ ನಡೆಯುವ ಈ ಉತ್ಸವದಲ್ಲಿ ಅಧ್ಯಕ್ಷತೆ ವಹಿಸುವ ಗೌರವಕ್ಕೆ, ನೆರೆಯ ಪ್ರಾಂತದ ಒಬ್ಬ ಅಧಿಕಾರಿಗಳನ್ನು ಆರಿಸಿರುವುದು ಮೊದಲು ನೋಡುವುದಕ್ಕೆ ಒಂದು ಬಗೆಯಾಗಿ ತೋರಿದರೂ, ಸ್ವಲ್ಪ ದೀರ್ಘಾಲೋಚನೆ ಮಾಡಿ ನೋಡಿದರೆ, ಮೈಸೂರಿನವರು ನಿಮ್ಮ ದೇಶಕ್ಕೆ ಎಂದಿಗೂ ಹೊರಗಿನವರಲ್ಲವೆಂಬುದು

ಗೊತ್ತಾಗುವುದು. ಏಕೆಂದರೆ ದಕ್ಷಿಣ ಕನ್ನಡ ಜಿಲ್ಲೆಯು ಹಿಂದೆ ಮೈಸೂರು ರಾಜ್ಯದ ಒಂದು ಭಾಗವಾಗಿದ್ದಿತು. ಈಗಲೂ ಅದು ಕರ್ಣಾಟಕದ ಒಂದು ಭಾಗವಾಗಿದ್ದೇ ಇದೆ. ಸಾಹಸಿಗಳಾದ ಈ ಜಿಲ್ಲೆಯ ಜನರು ಬಹಳ ಹಿಂದಿನ ಕಾಲದಿಂದಲೂ, ಮೈಸೂರು ದೇಶದ ಕಾಫಿ ವ್ಯವಸಾಯದ ಅಭಿವೃದ್ಧಿಗೆ ಬಹಳವಾಗಿ ನೆರವಾಗಿದ್ದಾರೆ. ಇತರ ವಿಧಗಳಲ್ಲಿಯೂ ಸಹ ಅವರು ಮೈಸೂರು ಸಂಸ್ಥಾನದವರೊಂದಿಗೆ ಸಂಬಂಧವುಳ್ಳವರಾಗಿದ್ದಾರೆ. ಈ ಸಂಬಂಧವು ಉತ್ತರೋತ್ತರ ವೃದ್ಧಿಗೊಂಡು ಮತ್ತಷ್ಟು ದೃಢವಾಗಿ ನೆಲಸಲೆಂದು ಹಾರೈಸೋಣ. ನಿಮಗೂ ನಮಗೂ ಪರಸ್ಪರ ಸೌಹಾರ್ದ ಮತ್ತು ಸಹಕಾರಭಾವಗಳು ನೆಲೆಗೊಂಡಿವೆಯೆಂಬುದಕ್ಕೆ ನಿದರ್ಶನವೇನಾದರೂ ಬೇಕಾಗಿದ್ದ ಪಕ್ಷಕ್ಕೆ, ನಾನು ಈ ದಿನ ನಿಮ್ಮೊಡನೆ ಇರುವುದೇ ಅದಕ್ಕೆ ಮತ್ತಷ್ಟು ನಿದರ್ಶನವಾಗಿದೆ. ಈ ರೀತಿಯಾದ ನಮ್ಮ ಉಭಯತ್ರರ ಸಮಾಗಮದ ಮತ್ತು ಸನ್ಮಿತ್ರತೆಯ ಬಾಂಧವ್ಯವು ಬಲಗೊಳ್ಳುವಂತೆ ನನ್ನಿಂದ ಸಾಧ್ಯವಿರುವುದನ್ನೆಲ್ಲಾ ಮಾಡಲು ನಾನು ಸರ್ವದಾ ಸಿದ್ಧನಾಗಿರುವೆನೆಂದು ತಮಗೆ ಭರವಸೆ ಕೊಡುತ್ತೇನೆ."

(ಮಂಗಳೂರಿನ ಭಾಷಣದಿಂದ)

"ಇತಿಹಾಸ ಪ್ರಸಿದ್ಧವಾದ ತಮ್ಮ ಊರಿಗೆ ಬರಲು ತಾವು ನನಗೆ ಅತ್ಯಂತ ಆದರದಿಂದ ಸ್ವಾಗತವನ್ನು ಬಯಸಿ ಸತ್ಕರಿಸಿರುವುದಕ್ಕಾಗಿ ತಮ್ಮನ್ನು ವಂದಿಸುತ್ತೇನೆ. ಪ್ರಾಚೀನ ವಿದ್ಯಾಪೀಠವಾದ ಈ ಊರು, ಮಹಾನುಭಾವರಾದ ಶ್ರೀ ಮಧ್ವಾಚಾರ್ಯರವರ ಉಪದೇಶಾದಿಗಳ ಪ್ರಭಾವದಿಂದಲೂ ಮತ್ತು ಅರ್ಜುನನಿಗೆ ದರ್ಶನ ಕೊಟ್ಟು ಅನುಗ್ರಹಿಸಿದ ಸುಪ್ರಸಿದ್ಧವಾದ ಶ್ರೀ ಕೃಷ್ಣಮೂರ್ತಿಯ ಸನ್ನಿಧಾನದ ಮಹಿಮೆಯಿಂದಲೂ ಪರಿಶೋಭಿಸುತ್ತಿದೆ. ಈ ಊರಿಗೆ ಬರುವ ಅವಕಾಶವು ನನಗೆ ದೊರೆತುದು ನನ್ನ ಸುಯೋಗವೆಂಬುದಾಗಿ ಭಾವಿಸುತ್ತೇನೆ.

ಇಲ್ಲಿ ನೋಡಿ ತಿಳಿದುಕೊಳ್ಳಬೇಕಾದ ಅಂಶಗಳನ್ನು ಪ್ರತ್ಯಕ್ಷವಾಗಿ ನೋಡಿ ತಿಳಿದು ಆನಂದಿಸುವುದಕ್ಕಾಗಿ ಒಬ್ಬ ಯಾತ್ರಿಕನ ಮನೋಧರ್ಮದಿಂದ ನಾನು ಇಲ್ಲಿಗೆ ಬಂದಿರುತ್ತೇನೆ. ಈ ಪ್ರದೇಶದ ಪ್ರಕೃತಿ ಸೌಂದರ್ಯದ ಸನ್ನಿವೇಶದಿಂದ ನಾನು ಮುಗ್ಧನಾಗಿದ್ದೇನೆ. ಇಂಥ ಸನ್ನಿವೇಶದ ಮಧ್ಯ

ದಲ್ಲಿ, ದ್ವೈತವೇದಾಂತಪ್ರವರ್ತಕರಾದ ಶ್ರೀಮಧ್ವಾಚಾರ್ಯರವರು ಸ್ಫೂರ್ತಿಯನ್ನು ಪಡೆದುದರಲ್ಲಿ ಆಶ್ಚರ್ಯವೇನು? ಅವರು ಅದೃಶ್ಯರಾಗಿ ಎಷ್ಟೋ ಶತಮಾನಗಳು ಕಳೆದಿವೆ. ಆದರೂ, ಅವರು ಸ್ಥಾಪಿಸಿದ ಮತವು ಸಚೇತನವಾಗಿರುವುದರ ಚಿಹ್ನೆಗಳು ಈಗಲೂ ಇಲ್ಲಿ ಕಂಗೊಳಿಸುತ್ತಿವೆ. ಇದು ಅವರ ನಿಸ್ಸೀಮ ಪ್ರತಿಭೆಯನ್ನು ವ್ಯಕ್ತಪಡಿಸುತ್ತದೆ. ಅವರ ತರುವಾಯ ಪಟ್ಟಕ್ಕೆ ಬಂದ ಪ್ರಸಿದ್ಧರಾದ ಅವರ ಶಿಷ್ಯ ಪ್ರಶಿಷ್ಯರುಗಳೂ ಸಹ ಅವರು ಹಚ್ಚಿಟ್ಟ ಜ್ಞಾನಜ್ಯೋತಿಯನ್ನು ಉಜ್ವಲಗೊಳಿಸಿ ಕಾಪಾಡಿ ಕೊಂಡು ಬಂದಿದ್ದಾರೆ. ಇದಕ್ಕಾಗಿ ಆ ಮಹಾನುಭಾವರುಗಳನ್ನು ಕೊಂಡಾಡಬೇಕಾಗಿದೆ. ಈಗಿನ ಪರ್ಯಾಯ ಸ್ವಾಮಿಗಳನ್ನು ಸಂದರ್ಶಿಸುವ ಸುಯೋಗವು ನನಗೆ ದೊರೆತಿರುವುದಂತೂ ನನಗೆ ಬಹಳ ಸಂತೋಷ. ಆ ಸ್ವಾಮಿಗಳವರು ವೇದಾಂತವನ್ನು ಉಪದೇಶಮಾಡುವುದರಲ್ಲಿ ಮಾತ್ರವೇ ತೃಪ್ತರಾಗದೆ, ಗ್ರಾಮಾಭಿವೃದ್ಧಿಯ ಕಾರ್ಯಗಳಲ್ಲಿಯೂ ತೀವ್ರಾಸಕ್ತಿ ವಹಿಸಿರುವರೆಂದು ನನಗೆ ತಿಳಿದು ಬಂದಿದೆ. ಈ ಅಭಿವೃದ್ಧಿ ಕಾರ್ಯಗಳನ್ನು ಅವರು ಮೊಟ್ಟಮೊದಲು ತಮ್ಮ ಗ್ರಾಮದಲ್ಲಿಯೇ ಪ್ರಾರಂಭಿಸಿದ್ದಾರೆ. ಧರ್ಮಬೋಧಕರು ತಮಗೆ ದೊರೆಯುವ ಕಾಲದ ಮತ್ತು ಹಣದ ಅವಕಾಶವನ್ನು ಉಪಯೋಗಿಸುವುದಕ್ಕಾಗಲಿ, ಶ್ರೀಮಧ್ವಾಚಾರ್ಯರು ಬೋಧಿಸಿರುವ ತತ್ವಗಳ ನಿಜವಾದ ಆಶಯವನ್ನು ವ್ಯಕ್ತಪಡಿಸುವುದಕ್ಕಾಗಲಿ ಇದಕ್ಕಿಂತಲೂ ಉತ್ತಮವಾದ ಮಾರ್ಗವು ಕಂಡುಬರುವುದಿಲ್ಲ. ಏಕೆಂದರೆ, ಆತ್ಮವೂ ಮತ್ತು ಪ್ರಪಂಚವೂ ವಾಸ್ತವವಾದವುಗಳೆಂಬುದೂ ಮತ್ತು ಇವೆರಡೂ ಸುಸ್ಥಿತಿಯಲ್ಲಿರುವಂತೆ ನೋಡಿಕೊಂಡು ವರ್ತಿಸುವುದೇ ನಿಜವಾದ ಮೋಕ್ಷಸಾಧನೆಯ ಮಾರ್ಗವೆಂಬುದೂ ಶ್ರೀಮಧ್ವಾಚಾರ್ಯರವರ ಸಿದ್ಧಾಂತದ ಸಾರ. ಜನತೆಗೆ ಒಳ್ಳೆಯದನ್ನು ಮಾಡುವ ಅಭಿಲಾಷೆಯುಳ್ಳವರೆಲ್ಲರೂ ಪರ್ಯಾಯ ಸ್ವಾಮಿಗಳವರ ಮೇಲ್ಪಂಕ್ತಿಯನ್ನನುಸರಿಸಿ ಕೆಲಸಮಾಡುವುದು ಸೂಕ್ತವೆಂದು ನನ್ನ ಭಾವನೆ.

(ಉಡುಪಿಯಲ್ಲಿನ ಭಾಷಣದಿಂದ)

"ಇದು ಚಿಕ್ಕ ಪಟ್ಟಣವೆಂದು ತಾವುಗಳು ಸೂಚಿಸಿದ್ದೀರಿ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬ ಮಾತುಗಳನ್ನು ತಾವೆಲ್ಲರೂ ಬಲ್ಲಿರಿ.

ಇತಿಹಾಸ ಪ್ರಸಿದ್ಧವಾದ ತಮ್ಮ ಪಟ್ಟಣಕ್ಕೆ ಆ ಮಾತುಗಳು ಬಹು ಚೆನ್ನಾಗಿ ಅನ್ವಯಿಸುತ್ತವೆ. ಹಿಂದೆ ಭೈರರಸರ ರಾಜಧಾನಿಯಾಗಿ ಈ ಪಟ್ಟಣವು ವೈಭವದಿಂದ ಬಾಳುತ್ತಿದ್ದ ಅಂಶವೂ ಇದನ್ನು ಸಮರ್ಥಿಸುತ್ತದೆ. ಅಲ್ಲದೆ ಈ ಪಟ್ಟಣದ ಸುತ್ತಮುತ್ತಲೂ ಶೋಭಿಸುತ್ತಿರುವ ಶಿಲ್ಪಕಲೆಯ ಉತ್ತಮ ನಿದರ್ಶನಗಳೂ ಇದನ್ನು ಸಮರ್ಥಿಸುತ್ತವೆ. ಇಲ್ಲಿಗೆ ಸಮೀಪದಲ್ಲಿ, ಬೆಟ್ಟದ ಮೇಲೆ ಧ್ಯಾನಮಗ್ನವಾಗಿರುವಂತೆ ಗೋಮಟೇಶ್ವರ ಮೂರ್ತಿ ಶೋಭಿಸುತ್ತಿದೆ. ಅದು ಶ್ರವಣಬೆಳಗೊಳದಲ್ಲಿರುವ ಗೋಮಟೇಶ್ವರ ಮೂರ್ತಿಯಷ್ಟು ಎತ್ತರವಾಗಿಲ್ಲವೆಂಬುದು ನಿಜವಾದರೂ, ಶಿಲ್ಪಕಲೆಯ ಸುಂದರ ನಿದರ್ಶನಗಳಲ್ಲಿ ಅದೂ ಒಂದು. ತಮ್ಮ ಪಟ್ಟಣವನ್ನು ಕಂಡು ತಾವುಗಳು ಹೆಮ್ಮೆ ಪಡಬಹುದಾಗಿದೆ. ಪ್ರಕೃತಿದೇವಿಯ ಮಡಿಲಿನಲ್ಲಿರುವಂತೆ ತೋರುವ ತಮ್ಮ ಪಟ್ಟಣವನ್ನು ಎಷ್ಟು ನೋಡಿದರೂ ಮನಸ್ಸು ದಣಿಯುವಂತಿಲ್ಲ. ಇಲ್ಲಿರುವ ಪ್ರಕೃತಿಸೌಂದರ್ಯವನ್ನು ನೋಡಿದಷ್ಟೂ ಉಲ್ಲಾಸವು ಹೆಚ್ಚುತ್ತದೆ."

(ಕಾರ್ಕಳದಲ್ಲಿನ ಭಾಷಣದಿಂದ)

## ಮುಸಲ್ಮಾನರು ಮತ್ತು ಕನ್ನಡ

ಮಂಗಳೂರಿನ ಮುಸಲ್ಮಾನರು ಒಂದು ಮಾನಪತ್ರವನ್ನು ದಿವಾನ ಸಾಹೇಬರವರಿಗೆ ಅರ್ಪಿಸಿದರು. ಅದಕ್ಕೆ ಉತ್ತರ ಕೊಡುತ್ತಾ—

ಮಂಗಳೂರು ಪ್ರಾಂತ್ಯದ ಮುಸ್ಲಿಮರಲ್ಲಿ ವಿದ್ಯಾಭ್ಯಾಸವು ಹೆಚ್ಚು ಮುಂದುವರಿದಿಲ್ಲವೆಂದು ವಿಜ್ಞಾಪನಾ ಪತ್ರದಲ್ಲಿ ಸೂಚಿಸಿದ್ದುದರ ವಿಚಾರವೆತ್ತಿ "ತಮ್ಮ ಪ್ರಕೃತ ಸ್ಥಿತಿಗೆ ಹೊರಗಿನ ಕಾರಣಗಳಿಗಿಂತಲೂ ಹೆಚ್ಚಾಗಿ ತಮ್ಮ ಪಂಗಡದೊಳಗಿನ ಕೆಲವು ಕುಂದುಕೊರತೆಗಳೇ ಕಾರಣ. ಇಂಥ ಸಂದರ್ಭಗಳಲ್ಲಿ ಸರ್ಕಾರದವರು ಹೆಚ್ಚಾಗಿ ಏನನ್ನೂ ಮಾಡಲು ಸಾಧ್ಯವಿಲ್ಲ. ಏನಿದ್ದರೂ ಆ ಪಂಗಡದ ಜನಗಳೇ ತಮ್ಮ ಜನಾಂಗದ ಪುರೋಭಿವೃದ್ಧಿಗಾಗಿ ಪ್ರವರ್ತಿಸಿ, ಮುಂದುವರಿಯಬೇಕು. ಹಾಗೆ ಮಾಡದಿದ್ದಲ್ಲಿ ಹೊರಗಿನಿಂದ ಎಷ್ಟೇ ಸಹಾಯ ಬಂದರೂ ಅವರು ಉದ್ಧಾರವಾಗುವುದಿಲ್ಲ" ಎಂದರು.

ಭಾಷೆಯ ವಿಚಾರವೆತ್ತಿ "ಹಿಂದೂಸ್ತಾನಿಯನ್ನು ವ್ಯಾಸಂಗಮಾಡುವ

ವಿಷಯದಲ್ಲಿ ದಕ್ಷಿಣ ದೇಶದಲ್ಲಿರುವ ಇತರ ಪಂಗಡಗಳವರಿಗೆ ಯಾವ ಆಕ್ಷೇಪಣೆಗಳಿದ್ದರೂ ಇರಲಿ, ತಾವುಗಳಂತೂ ತಮ್ಮ ಸರ್ಕಾರದವರು ಪಾಠ ಶಾಲೆಗಳಲ್ಲಿ ಹಿಂದೂಸ್ತಾನಿಯನ್ನು ಕಲಿಸುವಂತೆ ಮಾಡುತ್ತಿರುವ ಪ್ರಯತ್ನ ಗಳ ವಿಷಯದಲ್ಲಿ ಆದರ ಬುದ್ಧಿಯುಳ್ಳವರಾಗಿರಬೇಕು" ಎಂದರು.

ಮದರಾಸಿನಲ್ಲಿಯೂ ಇತರ ಕಡೆಗಳಲ್ಲಿಯೂ ಆಗುತ್ತಿರುವ ಹಿಂದಿ ಪ್ರಚಾರವನ್ನು ದಿವಾನ ಸಾಹೇಬರವರು ಸೂಕ್ಷ್ಮವಾಗಿ ಲಕ್ಷಿಸಿ ಈ ಸಲಹೆ ಯನ್ನು ಕೊಟ್ಟ ಹಾಗೆ ಕಾಣುತ್ತದೆ. "ಕನ್ನಡ ನಾಡಿನವರೆಲ್ಲರೂ ಭಾಷೆಯ ದೃಷ್ಟಿಯಿಂದಲೂ, ಸಾಹಿತ್ಯದ ದೃಷ್ಟಿಯಿಂದಲೂ, ಮತ್ತು ಸಂಸ್ಕೃತಿಯ ದೃಷ್ಟಿಯಿಂದಲೂ ಒಂದೇ ಕುಟುಂಬದವರೆಂಬ ಭಾವನೆಯಿಂದ ಬಾಳುವಂತಾಗಬೇಕು" ಎಂಬ ಮಾತಿಗೆ ಮುಸಲ್ಮಾನರಿಗಿತ್ತಿರುವ ಸಂದೇಶವು ವ್ಯತಿರಿಕ್ತವಾಗಿದೆಯೆಂದು ವಿಷಾದದಿಂದ ಸೂಚಿಸಬೇಕಾಗಿದೆ. ಮುಸ ಲ್ಮಾನರು, ಕ್ರೈಸ್ತರು ಯಾವ ಧರ್ಮವನ್ನು ಅವಲಂಬಿಸಿದ್ದರೂ ಕನ್ನಡಿ ಗರೇ. ಆ ಕನ್ನಡ ತತ್ವವನ್ನು ಅವರು ತಮ್ಮ ಹಾಗೂ ನಾಡಿನ ಹಿತದ ದೃಷ್ಟಿಯಲ್ಲಿ ಪರಿಪಾಲಿಸಿಕೊಂಡು ಬರಬೇಕು. ನಾವು ಹಿಂದೆ ಸೂಚಿಸಿರು ವಂತೆ ಮುಸಲ್ಮಾನರಿಂದ ಕನ್ನಡ ಸಂಸ್ಕೃತಿಗೆ ಅಪಾರ ಸೇವೆಯಾಗಿದೆ, ಮುಂದೆಯೂ ಆಗಬೇಕಾಗಿದೆ. ಮಂಗಳೂರಿನ ಮುಸಲ್ಮಾನರೂ ಇತರ ಮುಸಲ್ಮಾನರೂ ನಾಡ ಭಾಷೆಯ ಕಡೆಗೆ ಹೆಚ್ಚು ಗಮನ ಕೊಡಬೇಕಾಗಿ ನಮ್ಮ ವಿನಮ್ರ ಸೂಚನೆ.

ಕನ್ನಡ ನುಡಿ. ೨೪-೨-೩೯

---

# ೫. ಕನ್ನಡಕ್ಕಾಗಿ ಚಳವಳ

"ವಿದ್ಯಾಮಂತ್ರಿಗಳು ಮಂಗಳೂರಿಗೆ ಬಂದು ಹೋದಮೇಲೆ ಕನ್ನಡದ ಅಭಿಮಾನಿಗಳ ಕಳವಳ ಚಳವಳಗಳೆರಡೂ ಹೆಚ್ಚಿರುವುದು ಶುಭ ಚಿಹ್ನೆ ಯಾಗಿದೆ. ಜಿಲ್ಲಾ ಉಪಾಧ್ಯಾಯರ ಸಂಘದವರು ಮಂತ್ರಿವರ್ಯರಿಗೆ ಸಮರ್ಪಿಸಿದ ಮನವಿಯಲ್ಲಿ, ದಕ್ಷಿಣ ಕನ್ನಡದಲ್ಲಿ ಶಿಕ್ಷಣ ಭಾಷೆಯಾಗಲು

ಕನ್ನಡವೊಂದೇ ಅರ್ಹವಾದುದೆಂದು ಸಮರ್ಪಕವಾಗಿ ಸಿದ್ಧಾಂತಪಡಿಸಿರುವರು. ನಮ್ಮ ಪ್ರಾಂತದಲ್ಲಿ ಶಾಲೆಗಳಲ್ಲಿ ಹಿಂದಿಯನ್ನು ಕಲಿಸಬೇಕೆಂದು ಒತ್ತಾಯವಿದೆ; ದೇಶ ಭಾಷೆಗಳ ಮೂಲಕ ಶಿಕ್ಷಣ ಕೊಡಬೇಕೆಂಬ ಸರಕಾರದ ಧೋರಣಕ್ಕೆ ಅಪವಾದ ತರುವುದಾದರೂ ಹೇಗೆ?

ಕೊಂಕಣಿಯೇ ಮನೆ ಮಾತಾಗಿರುವ ಕ್ರಿಸ್ತ ಸಮಾಜದವರಿಗೆ ಕನ್ನಡವು ಕಠಿಣವಾಗುವುದಂತೆ! 'ಕಠಿಣ'ವಾದ ಈ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಸ್ವೀಕರಿಸಲು ಯಾರೂ ಆಕ್ಷೇಪಿಸುವುದಿಲ್ಲ. ಶಿಕ್ಷಣ ಸಾಧನವಾಗುವಲ್ಲಿ ಮಾತ್ರ ಮತಭೇದ. ಸತ್ಯಪಕ್ಷಪಾತಿಗಳಾದವರು ನಮ್ಮ ಜಿಲ್ಲೆಯ ಎಲ್ಲ ಪ್ರಾಥಮಿಕ ಶಾಲೆಗಳ ಸಂಖ್ಯೆಯನ್ನು ಸಂಗ್ರಹಿಸಬೇಕು; ಕೊಂಕಣಿ ಮಾತಾಡುವ ಕ್ರಿಸ್ತಬಂಧುಗಳ ಮಕ್ಕಳಲ್ಲಿ ಎಷ್ಟು ಜನ ಪ್ರಥಮ ವರ್ಗದಿಂದಲೇ ಕನ್ನಡದಲ್ಲಿ ಕಲಿಯುತ್ತಾರೆ? ಎಷ್ಟು ಜನ ಆಂಗ್ಲ ಭಾಷೆಯಲ್ಲಿ ಕಲಿಯುತ್ತಾರೆ? ಎಂಬುದನ್ನು ಪರಾಮರ್ಶಿಸಬೇಕು. "ಕನ್ನಡವು ಇಂಗ್ಲೀಷಿಗಿಂತ ಕಠಿಣ" ಎಂಬುದು ನಗರವಾಸಿಗಳಲ್ಲಿ ಕೆಲವರ ಕೂಗು. ಹಳ್ಳಿಗಳಲ್ಲಿ ಈ ಪ್ರಶ್ನೆಯೇ ಇಲ್ಲ. ನಗರವಾಸಿಗಳಿಗಾಗಿ—ಅವರಲ್ಲಿಯೂ ಶ್ರೀಮಂತರೆನಿಸುವ ಕೆಲವರಿಗಾಗಿ-ನಮ್ಮ ವಿದ್ಯಾಕ್ರಮವು ಒದಗಬೇಕೆಂದಾದರೆ, ಅದರಂತಹ ಶೋಚನೀಯ ಸ್ಥಿತಿ ಇನ್ನಾವುದು?

ಕ್ರಿಸ್ತ ಸಮಾಜ ಸಂಸ್ಥೆಗಳು ನಡಸುತ್ತಿರುವ ವಿದ್ಯಾ ಸಂಸ್ಥೆಗಳ ಕಷ್ಟಸುಖಗಳನ್ನು ನಾವು ಬಲ್ಲೆವು. ಒಂದೇ ಸಮನೆ, ಕನ್ನಡವೇ ಶಿಕ್ಷಣ ಭಾಷೆಯಾಗಬೇಕೆಂದು ಬಲಾತ್ಕರಿಸಿದಲ್ಲಿ ಅವುಗಳಿಗೇನೇನೂ ಸಂಕಷ್ಟಗಳು ಒದಗಬಹುದೆಂಬುದನ್ನು ಬಲ್ಲೆವು. ಆದರೆ, ಈ ಕ್ರೈಸ್ತ ಸಂಸ್ಥೆಗಳವರೇ ಮನಸ್ಸು ಮಾಡಿದಲ್ಲಿ, ಇತರರಿಗಿಂತ ಚೆನ್ನಾಗಿ ಕನ್ನಡದಲ್ಲಿ ಕಲಿಸಲು ಏರ್ಪಾಟು ಮಾಡಲು ಸಮರ್ಥರೆಂಬುದನ್ನೂ ಬಲ್ಲೆವು. ದೇಶ ಭಾಷೆಯಲ್ಲಿ ಕಲಿಸುವ ಮತ್ತು ಆಂಗ್ಲ ಭಾಷೆಯಲ್ಲಿ ಕಲಿಸುವ ಅವರ ಶಾಲೆಗಳನ್ನೇ ಉದಾಹರಣೆಗಾಗಿ ತೆಗೆದುಕೊಂಡರೆ ಮೇಲಿನ ಮಾತಿನ ಸತ್ಯತೆಯು ಸ್ವತಃ ತಿಳಿದುಬರುವುದು. ವಸ್ತು ಸ್ಥಿತಿಯು ಹೀಗಿರುತ್ತಾ, ಈ ಶಾಶ್ವತವಾದ ವಿಮೋಚನೆಯನ್ನು (Exemption) ಕೇಳುವುದರ ಬದಲಾಗಿ ನಿರ್ದಿಷ್ಟವಾದ ಅವಧಿ

ಯೊಳಗೆ ದೇಶಭಾಷೆಯ ಮೂಲಕ ಶಿಕ್ಷಣದಾನದ ವ್ಯವಸ್ಥೆಯನ್ನವರು ಕೈಕೊಳ್ಳುವುದು ಸಂದರ್ಭೋಚಿತವಾಗಿದೆ."

ಕನ್ನಡಕ್ಕೆ ವಿರೋಧವಾದ ಈ ಕೂಗು ನಗರವಾಸಿಗಳಾದ ಕೆಲವು ರೋಮನ್ ಕ್ಯಾಥೊಲಿಕ್ಕರದೆಂದು "ರಾಷ್ಟ್ರಬಂಧು"ವಿನ ಸಂಪಾದಕೀಯದಿಂದ ವ್ಯಕ್ತವಾಗುತ್ತದೆ. ಕನ್ನಡದ ಉತ್ಕರ್ಷದ ಸಲುವಾಗಿ ಕ್ರಿಸ್ತರು ಮಾಡಿರುವ ಸೇವೆ ಅಸ್ಟಿಷ್ಟಲ್ಲ. ರೆ|| ಕಿಟ್ಟೆಲ್, ಜೀಗ್ಲರ್, ಮೋಗ್ಲಿಂಗ್, ವೊರ್ತ್, ವೀಗಲ್‌ರವರುಗಳೆಲ್ಲಾ ಕ್ರಿಸ್ತರೇ. ಕ್ರಿಸ್ತರಲ್ಲಿ ಕನ್ನಡ ಬಳಕೆಯಿಲ್ಲದಿದ್ದರೆ, ಕನ್ನಡ ಸಾಹಿತ್ಯ, ವ್ಯಾಕರಣ, ಛಂದಸ್ಸುಗಳ ಪರಿಚಯ ಕ್ರಿಸ್ತರಿಗೆ ಹೆಚ್ಚು ಬೇಕೆಂಬ ಭಾವನೆ ಬರದಿದ್ದರೆ ಈ ಮಾನ್ಯ ಪಂಡಿತರು ಕನ್ನಡದಲ್ಲಿ ದುಡಿಯಬೇಕಾದ ಅಗತ್ಯವೇ ಇರಲಿಲ್ಲ. ಇಂದು ಕೆಲವು ಮಂದಿ ಮಂಗಳೂರು ಕ್ರಿಸ್ತರಲ್ಲಿ ಮೂಡಿರುವ ಆಂಗ್ಲಮೋಹ—ಕನ್ನಡ ದ್ರೋಹಕ್ಕೆ ವೈಯಕ್ತಿಕ ಕಾರಣಗಳು ಮುಖ್ಯವಲ್ಲದೆ ಯಾವ ತತ್ವ ಸಿದ್ಧಾಂತಗಳ ಆಧಾರವೂ ಅಲ್ಲ. ವಿದ್ಯಾಮಂತ್ರಿಗಳನ್ನು ಒಲಿಸಿಕೊಂಡು ಅವರ ಕೈಯಿಂದ ಈ ಅನ್ಯಾಯವನ್ನು ಮಂಗಳೂರಿನ ಕೆಲವು ಕ್ರಿಸ್ತರು ಮಾಡಿಸುತ್ತಿರುವುದರಿಂದ ನಾವು ಈ ಕನ್ನಡ ಅಪಪ್ರಚಾರವನ್ನು ಖಂಡಿಸಬೇಕಾಗಿದೆ.

ಮಂಗಳೂರಿನ ಕನ್ನಡಿಗರು ಒಂದುಗೂಡಬೇಕು. ಶ್ರೀ. ವಾರ್ಕಿಯವರ ಸುಗ್ರೀವಾಜ್ಞೆಯನ್ನು ಅವರು ಹಿಂದಕ್ಕೆ ತೆಗೆದುಕೊಳ್ಳುವಂತೆ ಅವರನ್ನೇ ಪ್ರೇರೇಪಿಸಬೇಕು; ಅವರು ಹಿತವಚನಗಳಿಗೆ ಕಿವಿಗೊಡದಿದ್ದರೆ ಪ್ರಧಾನ ಮಂತ್ರಿಗಳ ನೆರವನ್ನು ಪಡೆಯಬೇಕು. ಈಗ ಕನ್ನಡಿಗರು ಆಲಸ್ಯವನ್ನು ತೋರಿದರೆ ಯಾವಜ್ಜೀವವೂ ಅದರ ವಿಷಫಲವನ್ನುಪಭೋಗಿಸಬೇಕಾದೀತು.

ಕನ್ನಡ ನುಡಿ—೨—೫—೪೯

---

# ೬. ಶಿಕ್ಷಣದಲ್ಲಿ ಮಾತೃಭಾಷೆಯ ಸ್ಥಾನ

ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಮಾರಂಭದಲ್ಲಿ ರೆ|| ಸಿ. ಎಫ್. ಆಂಡ್ರೂಸ್‌ರವರು ಮಾಡಿದ ಭಾಷಣವು ಎಲ್ಲ ರೀತಿಯ

ಲ್ಲಿಯೂ ಮನನೀಯವಾಗಿದೆ. ಇಂಗ್ಲಿಷ್ ವಿದ್ಯಾಭ್ಯಾಸದಿಂದ ಭಾರತ ವರ್ಷಕ್ಕಾಗಿರುವ ಅನುಕೂಲ ಪ್ರತಿಕೂಲಗಳನ್ನು ವಿಮರ್ಶಿಸಿ ಭಾರತೀಯರ ಶಿಕ್ಷಣಕ್ಕೆ ಮಾತೃಭಾಷೆಯಲ್ಲದೆ ಇಂಗ್ಲಿಷ್ ಸರ್ವಥಾ ಯೋಗ್ಯವಾದುದಲ್ಲ ವೆಂದು ಆಂಡ್ರೂಸ್‌ರವರು ಸಮರ್ಥಿಸಿದರು. ಇಂಗ್ಲಿಷ್ ಶಿಕ್ಷಣದ ಮಬ್ಬಿಗೆ ಬಿದ್ದು ಭಾರತೀಯರು ತಮ್ಮ ವ್ಯಕ್ತಿತ್ವ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯ ಗಳನ್ನು ಹೇಗೆ ಕಳೆದುಕೊಂಡರೆಂಬುದನ್ನು ಸೂಚಿಸಿ ಈ ಪರಿಸ್ಥಿತಿ ಭಾರತ ವರ್ಷವನ್ನು ಬಿಟ್ಟು ಪೃಥ್ವಿಯಲ್ಲಿ ಇನ್ನೆಲ್ಲಿಯೂ ಕಂಡುಬರುವುದಿಲ್ಲ ವೆಂದರು. ಶಿಕ್ಷಣಕ್ಕೆ ಮಾತೃ ಭಾಷೆಯೇ ಆಗಬೇಕೆಂದು ಸಮರ್ಥಿಸುತ್ತಾ—

"ಇಂಗ್ಲಿಷನ್ನು ಸಂಪೂರ್ಣವಾಗಿ ಬಿಟ್ಟುಬಿಡಬಹುದೋ ಎಂದು ಕೇಳಿ ದರೆ 'ಆಗದು' ಎಂದು ಹೇಳಬೇಕಾಗುತ್ತದೆ. ಅದರಲ್ಲಿ ಅನೇಕ ಒಳ್ಳೆಯ ಅಂಶಗಳಿವೆ. ಆದರೆ ಇಂಗ್ಲಿಷ್ ಶಿಕ್ಷಣ ಮಾಧ್ಯಮವಾಗಿರಲು ಸಾಧ್ಯವಿಲ್ಲ. ಮಾತೃಭಾಷೆಯೇ ಶಿಕ್ಷಣ ಭಾಷೆಯಾಗಿರಬೇಕು. ಭೂಗೋಳ, ಇತಿ ಹಾಸ, ಗಣಿತಗಳನ್ನು ಪಾಠಹೇಳುವಾಗ ಭಾರತೀಯ ಅಧ್ಯಾಪಕರು ಮಾತೃಭಾಷೆಯನ್ನೇ ಬಳಸಬೇಕು. ಹೀಗೆ ಮಾಡಿದ್ದಾದರೆ ಸರಕಾರ ಕೂಡ ನ್ಯಾಯಸ್ಥಾನಗಳಲ್ಲಿಯೂ ಮಾತೃಭಾಷೆಯನ್ನು ಬಳಸಲು ಆರಂ ಭಿಸುತ್ತದೆ" ಎಂದು ಹೇಳಿದ್ದಾರೆ. ವಿಶ್ವವಿದ್ಯಾನಿಲಯದ ಶಿಕ್ಷಣವೆಲ್ಲಾ ಮಾತೃಭಾಷೆಯಲ್ಲಿಯೇ ಆಗಬೇಕೆಂದು ಆಂಡ್ರೂಸರವರು ಹೇಳಿರುವುದನ್ನೂ ನ್ಯಾಯಸ್ಥಾನ ಮತ್ತು ಸರ್ಕಾರದ ವ್ಯವಹಾರ ಭಾಷೆ ಮಾತೃಭಾಷೆಯೇ ಆಗಿರಬೇಕೆಂದು ಒತ್ತಿ ಹೇಳಿರುವುದನ್ನೂ ಅಧಿಕಾರಿಗಳು ಗಮನಿಸುತ್ತಾ ರೆಂದು ನಂಬಿದ್ದೇವೆ. ಕಳೆದ ನ್ಯಾಯವಿಧಾಯಕ ಸಭೆಯ ಅಧಿವೇಶನದಲ್ಲಿ ಶಿವಮೊಗ್ಗೆಯ ಶ್ರೀ|| ಪುಟ್ಟನಂಜಪ್ಪನವರು ಈ ವಿಷಯವನ್ನು ಸರ್ಕಾರದ ಗಮನಕ್ಕೆ ತಂದರು. ಈ ವರ್ಷದ ಪ್ರಜಾಪ್ರತಿನಿಧಿ ಸಭೆಯ ದಸರಾ ಅಧಿ ವೇಶನದಲ್ಲಿ ಶ್ರೀ|| ಕೆ. ಟಿ. ಭಾಷ್ಯಂರವರು ಕೋರ್ಟುಗಳ ಭಾಷೆ ಕನ್ನಡ ವಾಗಿರಬೇಕೆಂದೂ, ಈಗಿರುವ ಪದ್ಧತಿಯಿಂದ ಸರಿಯಾದ ನ್ಯಾಯ ದೊರಕು ತ್ತಿಲ್ಲವೆಂದೂ ಪ್ರತಿಪಾದಿಸಿದರು. ಸರ್ಕಾರದವರು ಅವರ ಮನವಿಗೆ ಸಾಕಷ್ಟು ಗಮನ ಕೊಟ್ಟಹಾಗೆ ಕಾಣುವುದಿಲ್ಲ. ದೇಶದ ಬಹು ಸಂಖ್ಯಾತ ಜನ ಇಂಗ್ಲಿಷು ಅರಿಯದವರಾಗಿದ್ದಾರೆ. ಅವರ ವ್ಯವಹಾರ ಭಾಷೆ ಮಾತೃ

ಭಾಷೆ. ಶಿಕ್ಷಣವೂ, ನ್ಯಾಯಸ್ಥಾನದ ಸೌಕರ್ಯವೂ ಅವರ ಹಿತಕ್ಕಾಗಿ ಏರ್ಪಟ್ಟಿದ್ದರೆ ಅವರಿಗೆ ತಿಳಿಯುವ ರೀತಿ, ತಿಳಿಯುವ ಭಾಷೆಯಲ್ಲಿ ವ್ಯವಹಾರ ನಡೆಯಬೇಕಾದುದು ಕೇವಲ ಧರ್ಮ. ಇಂದಿನ ನ್ಯಾಯಸ್ಥಾನಗಳಲ್ಲಿ ಅನಕ್ಷರಸ್ಥರಾದ ಹಳ್ಳಿಗರು ಹೇಗೆ ಇಂಗ್ಲಿಷಿನ ವ್ಯಾವಹಾರಿಕ ಪದ್ಧತಿಗೆ ಬಲಿಯಾಗುತ್ತಿದ್ದಾರೆಂಬುದನ್ನು ನೋಡಬಹುದು. ವಿಶ್ವವಿದ್ಯಾನಿಲಯದಲ್ಲಿ ಪ್ರೌಢ ವಿದ್ಯಾಶಾಲೆಗಳಲ್ಲಿಯೂ ವಿದ್ಯಾರ್ಥಿಗಳ ಪಾಡೂ ಅದೇ ಆಗಿದೆ. ಇತ್ತ ಸ್ವಭಾಷೆ, ಸ್ವಸಂಸ್ಕೃತಿಗಳು ಗೊತ್ತಾಗುವುದಿಲ್ಲ. ಅತ್ತ ಪರಭಾಷೆ, ಪರ ಸಂಸ್ಕೃತಿಗಳು ಅರ್ಥವಾಗುವುದಿಲ್ಲ. ದೊಡ್ಡ ದೊಡ್ಡ ಪದವೀಧರರೂ ನಾಲ್ಕು ಮಾತುಗಳನ್ನು ಮಾತೃಭಾಷೆಯಲ್ಲಿ ಕೂಡಿಸಿ ಉಚ್ಚರಿಸಲಾರದವರಾಗಿದ್ದಾರೆ. ಜನಸ್ತೋಮಕ್ಕೂ ಕಲಿತವರ್ಗಕ್ಕೂ ಯಾವ ಸಂಬಂಧವೂ ಇಲ್ಲ. ವಿದ್ಯೆ ಪಾಮರ ಗಣದ ಉನ್ನತಿಗೆ ನಿವೇದನವಾಗುವುದರ ಬದಲು ವಿದ್ಯಾವಂತರ ಸಣ್ಣ ಪುಟ್ಟ ಕೋಟೆಕೊತ್ತಲಗಳ ನಿರ್ಮಾಣಕ್ಕೆ ಅನುಕೂಲವಾಗುತ್ತದೆ. ಈ ವಿದ್ಯಾವಂತರು ಎಲ್ಲಾ ರೀತಿಯಲ್ಲಿಯೂ ಜನತೆಗೂ ಜನತೆಯ ಸಂಸ್ಕೃತಿಗೂ ದೂರವಾಗುತ್ತಾರೆ. ಈ ಪರಿಸ್ಥಿತಿ ಹೋಗಬೇಕಾದರೆ ರೆ॥ ಆಂಡ್ರ್ಯೂಸ್‌ರವರು ಒತ್ತಿ ಹೇಳಿರುವಂತೆ ಮಾತೃಭಾಷೆಯೇ ಶಿಕ್ಷಣದ ಭಾಷೆಯಾಗಬೇಕು. ಮಾತೃಭಾಷೆಯೇ ನ್ಯಾಯಸ್ಥಾನಗಳ ಹಾಗೂ ಸರ್ಕಾರದ ವ್ಯವಹಾರದ ಭಾಷೆಯಾಗಬೇಕು.

ಕನ್ನಡನುಡಿ ೧೪–೧೦–೩೮.

---

## ೭. ಸ್ತ್ರೀಯರೂ ಕನ್ನಡವೂ

ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರಿಗೆ ಅಭಿನಂದನವನ್ನರ್ಪಿಸಲು ಕಳೆದ ಭಾನುವಾರ ಸೇರಿದ ಬೆಂಗಳೂರಿನ ಮಹಾಜನರ ಸಭೆಯಲ್ಲಿ ಕೊಡಗಿನ ಶ್ರೀಮತಿ ಸಾಕಮ್ಮನವರು ಆಡಿದ ಕೆಲವು ಮಾತುಗಳು ಮಹನೀಯವಾಗಿವೆ.

"ಕನ್ನಡ ಸಾಹಿತ್ಯದಲ್ಲಿ ಪಂಪ, ರನ್ನ, ರತ್ನಾಕರ, ಹರಿಹರ, ಕುಮಾರವ್ಯಾಸಾದಿ ಕವಿಗಳು ಹೇಗೆ ಪ್ರಸಿದ್ಧರೋ ಹಾಗೆ ಕಂತಿ, ಮಹಾ

ದೇವಿ, ಹೊನ್ನಮ್ಮ, ಗಿರಿಯಮ್ಮ ಮೊದಲಾದ ಕವಿಗಳೂ ಪ್ರಸಿದ್ಧರಾಗಿದ್ದಾರೆ. ಬ್ರಾಹ್ಮಣರು, ವೀರಶೈವರು, ಜೈನರು ಜಾತಿಭೇದವನ್ನೆಣಿಸದೆ ಕನ್ನಡ ಸಾಹಿತ್ಯ ವೃಕ್ಷವನ್ನು ಬೆಳಸಿದಂತೆ ಸ್ತ್ರೀಯರೂ ಬೆಳಸಿದ್ದಾರೆ. ಆದರೆ ಇಂದು ಸ್ತ್ರೀಯರ ಮನಸ್ಸು ಬೇರೆ ಬೇರೆ ವಿಷಯಗಳಲ್ಲಿ ಪ್ರವೃತ್ತವಾಗಿದೆ. ಕನ್ನಡಕ್ಕೆ ದೂರವಾದ, ಕೆಲವು ವೇಳೆ ಕನ್ನಡಕ್ಕೆ ಹಿತಕರವಲ್ಲದ ಇತರ ಭಾಷಾ ಸಂಸ್ಕೃತಿಗಳಲ್ಲಿ ಪ್ರವೃತ್ತವಾಗಿದೆಯೆಂದರೂ ತಪ್ಪಾಗುವುದಿಲ್ಲ. ಇದರಿಂದ ಕನ್ನಡ ಸಾಹಿತ್ಯವೃಕ್ಷ ಕೊರಗಿ ಸೊರಗುವುದಲ್ಲದೆ ಕನ್ನಡ ಜನರ ಜೀವನವೇ ಕಂದಿಕುಂದುತ್ತದೆ. 'ತಮ್ಮತನ'ವನ್ನು ಮರೆತ ಕನ್ನಡಿತಿಯರು ನಿರುಪಯೋಗಿಗಳಾಗುತ್ತಾರೆ. ಅವರಿಂದ ದೇಶಕ್ಕೂ, ಸಾಹಿತ್ಯಕ್ಕೂ ಯಾವ ಯಾವ ಕಲ್ಯಾಣಕಾರಕವಾದ ಮಹಾಕಾರ್ಯಗಳಾಗಬಹುದೋ ಅವುಗಳು ನಿಲ್ಲುವವಲ್ಲದೆ ಕನ್ನಡ ಪ್ರಗತಿಗೆ ವಿರೋಧವಾದ ಕೆಲಸಗಳು ಬೆಳೆಯುತ್ತವೆ".

ಶ್ರೀಮತಿಯವರ ಈ ಸತ್ಯವಾಕ್ಯಗಳು ನಮ್ಮ ನಾಡಿನ ಎಲ್ಲ ನಾರಿಯರ ಗಮನವನ್ನು ಸೆಳೆಯುವುವೆಂದು ನಂಬಿದ್ದೇವೆ. ಕನ್ನಡ ಸಾಹಿತ್ಯ ವೃಕ್ಷಕ್ಕೆ **ಅಂದು** ಸ್ತ್ರೀಯರು ನೆರವಾದಂತೆ **ಇಂದೂ** ಕೆಲವರು ನೆರವಾಗಿದ್ದಾರೆ. ಭಾರತಿ, ಜೈನಮಹಿಳೆ, ಶ್ಯಾಮಲಾ ಮೊದಲಾದ ಕಬ್ಬಿಗಿತಿಯರೂ ಶಾಮಲಾದೇವಿ, ಮಿಸೆಸ್ ಬಿ. ಟಿ. ಜಿ. ಕೃಷ್ಣ, ಕಲ್ಯಾಣಮ್ಮ, ಕುಮಾರಿ ಪದ್ಮಾವತಿ ಮೊದಲಾದ ಕತೆಗಾರ್ತಿಯರೂ ಉತ್ತಮ ಕೃತಿಗಳನ್ನು ದೊರಕಿಸಿದ್ದಾರೆ. ಆದರೆ ಶ್ರೀಮತಿ ಸಾಕಮ್ಮನವರು ಹೇಳುವಂತೆ ಸ್ತ್ರೀಗಣದ ಲಕ್ಷ್ಯ ಪರಭಾಷೆ, ಪರಸಂಸ್ಕೃತಿಗಳ ಕಡೆಗಿರುವುದೂ, ಹೊಸದೆಂಬ ಕಾರಣದಿಂದ ತಾಯಿ ನುಡಿಯನ್ನು ಅವರು ಮರೆಯುತ್ತಿರುವುದೂ ತುಂಬ ಶೋಚನೀಯವಾಗಿದೆ. ಸಾಹಿತ್ಯವು ಜೀವನದ ಪ್ರತೀಕವೆಂದು ನಾವು ಒಪ್ಪಿದರೆ ಜೀವನಕ್ಕೆ ಸ್ತ್ರೀಪುರುಷರ ಸ್ನೇಹ ಸೌಹಾರ್ದಗಳು ಎಷ್ಟು ಅವಶ್ಯಕವೋ ಸಾಹಿತ್ಯಕ್ಕೂ ಅಷ್ಟೇ ಅವಶ್ಯಕವೆಂಬುದು ವ್ಯಕ್ತವಾಗುತ್ತದೆ. ನಮ್ಮ ಜೀವನ, ಆಚಾರವಿಚಾರ, ಮಾತುಕತೆ, ಉಡುಗೆತೊಡುಗೆ, ತಿಂಡಿತೀರ್ಥಗಳೆಲ್ಲಾ ಕನ್ನಡಮಯವಾಗಬೇಕು. ಕನ್ನಡದ್ದೇ ವಿಶಿಷ್ಟವಾದ ಸೊಲ್ಲಿದೆ, ಎಲ್ಲಿದ್ದರೂ 'ತನ್ನತನ'ವನ್ನು ತೋರುವ ಶಕ್ತಿ ಅದಕ್ಕಿದೆ. ಅದು ವಿಕಸಿಸಿ

ಉತ್ಕರ್ಷಿಸುವಂತೆ ಪ್ರಯತ್ನಿಸಬೇಕಾದುದು ಕನ್ನಡ ಮಕ್ಕಳ ಕರ್ತವ್ಯ.

ಇದರಲ್ಲಿ ಗಡಿನಾಡಿನಲ್ಲಿರುವ ಕನ್ನಡಿತಿಯರ ಹೊಣೆಗಾರಿಕೆ ಹೆಚ್ಚಾಗಿದೆ. ಕನ್ನಡವನ್ನು ಕಾಪಾಡುವ ದೊಡ್ಡ ಕರ್ತವ್ಯಭಾರ ಅವರಮೇಲೆ ಬಿದ್ದಿರುತ್ತದೆ. ನಮ್ಮ ದೇಶ ಇನ್ನೂ ಸಂಪೂರ್ಣವಾಗಿ ಆಂಗ್ಲಮಯವಾಗದೆ ದೇಶಭಾಷೆಗಳು ಕೊರಗುತ್ತಲಾದರೂ ಉಳಿದಿರುವುದಕ್ಕೆ ಭಾರತ ಸ್ತ್ರೀಯರ ಅಂತಃಕರಣವೇ ಕಾರಣವೆನ್ನಬಹುದು. ಅಂದಿನಿಂದ ಉಳಿದುಬಂದ ಕನ್ನಡ ಸಂಸ್ಕೃತಿ ಮತ್ತು ಜೀವನ ಇಂದು ಉತ್ತರದ ಭಾಷೆ ಸಂಸ್ಕೃತಿಗಳಿಗೆ ನಮ್ಮ ಸ್ತ್ರೀಯರ ಸಹಕಾರದಿಂದಲೇ ಮಾರುಹೋಗುವುದೆಂದರೆ ಬಹಳ ಶೋಚನೀಯ. ಕನ್ನಡ ತಾಯಂದಿರು ತಮ್ಮ ಪಾಲುಣಿಸನ್ನು ಕನ್ನಡ ಮಕ್ಕಳಿಗೆ ಮೀಸಲಾಗಿಡಬೇಕೆಂಬುದನ್ನು ಮರೆಯದಿದ್ದರೆ ಸಾಕು. ಸಕಾಲದಲ್ಲಿ ಎಚ್ಚರಿಕೆಯನ್ನಿತ್ತಿರುವ ಹಿರಿಯ ಕನ್ನಡಿತಿಯರಾದ ಶ್ರೀಮತಿ ಸಾಕಮ್ಮನವರ ಮನದ ಮಾತು ಎಲ್ಲ ಕನ್ನಡಿತಿಯರ ಮನದ ಮಾತಾಗಲೆಂದು ನಾವು ಹಾರೈಸುತ್ತೇವೆ.

ಕನ್ನಡನುಡಿ ೨೧–೧೦–೩೮.

---

## ೮. ಮುಸಲ್ಮಾನರೂ ಕರ್ನಾಟಕವೂ

ಕರ್ನಾಟಕಕ್ಕೂ ಮುಸಲ್ಮಾನರಿಗೂ ಹದಿನಾಲ್ಕನೆಯ ಶತಮಾನದಿಂದ ಸಂಬಂಧ ಬೆಳೆದು ಬಂದಿದೆ. ಅವರು ಕರ್ನಾಟಕಕ್ಕೆ ಬಂದು ಕೊಳ್ಳೆ ಹೊಡೆದು ಹೊರಟು ಹೋಗದೆ ಇಲ್ಲಿಯೇ ನಿಂತು ರಾಜ್ಯಗಳನ್ನು ಕಟ್ಟಿ, ವೈಭವದಿಂದ ಆಳಿದರು. ಶಿಲ್ಪ, ಚಿತ್ರ, ಸಂಗೀತ ಕಲೆಗಳಲ್ಲಿ ತಮ್ಮ ಸಂಪ್ರದಾಯದ ಪರಿಚಯವನ್ನು ಮಾಡಿಕೊಟ್ಟು ಗೋಲ್ಕಂಡ, ಬಿಜಾಪುರ ಶ್ರೀರಂಗಪಟ್ಟಣಗಳಲ್ಲಿ ಸುಂದರ ಶಿಲ್ಪ ಸೌಧಗಳನ್ನು ರಚಿಸಿದರು. 'ದಕ್ಷಿಣ ಸಂಪ್ರದಾಯ'ವೆನಿಸಿಕೊಳ್ಳುವ ಚಿತ್ರಕಲಾ ಮಾದರಿಯ ಜನಕರಾಗಿ ಸಾವಿರಾರು ಚಿತ್ರಗಳನ್ನು ಬರೆಸಿ ಕರ್ನಾಟಕಕ್ಕೆ ದಾನಮಾಡಿದರು. ಕಟು ಧರ್ಮದ ಸುನ್ನಿ ಪಂಗಡಕ್ಕೆ ಸೇರಿದವನಾಗಿದ್ದರೂ ಟಿಪ್ಪೂಸುಲ್ತಾನನು

ಶ್ರೀ ಶೃಂಗೇರಿ ಜಗದ್ಗುರುಗಳೊಂದಿಗೆ ಮಧುರ ಮೈತ್ರಿಯನ್ನಿಟ್ಟುಕೊಂಡು ಅವರನ್ನು ಗುರುಗಳಂತೆ ಭಾವಿಸುತ್ತಿದ್ದನು. ಬಾಬಾಬುಡನ್ ಬೆಟ್ಟದ ಮೇಲಿರುವ ದತ್ತಾತ್ರೇಯ ಪೀಠ ಹಿಂದೂ ಮುಸಲ್ಮಾನರಿಬ್ಬರ ಭಕ್ತಿ ಗೌರವಗಳ ಕುರುಹಾಗಿದೆ. ಶ್ರೀ ಸಿದ್ಧಾರೂಢ, ಎಲ್ಲವ್ವ ಜಾತ್ರೆಗಳಲ್ಲಿ ಮುಸಲ್ಮಾನರು ಧಾರಾಳವಾಗಿ ಭಾಗವಹಿಸುತ್ತಾರೆ; ಮೌಲಾ ಅಲಿ, ಮಸ್ತಾನ್ ಸಾಹೇಬ್, ಷೇಕ್ ವಲ್ಲಿಯವರುಗಳ ಉರುಸುಗಳಲ್ಲಿ ಹಿಂದುಗಳು ಭಾಗವಹಿಸುತ್ತಾರೆ.

ಕನ್ನಡ ಸಂಸ್ಕೃತಿಗೆ ಮುಸಲ್ಮಾನರು ನಾನಾ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ಶಿಶುನಾಳ ಷರೀಫಸಾಹೇಬರು ತಮ್ಮ ಅಧ್ಯಾತ್ಮಶಕ್ತಿಯಿಂದ ಹಿಂದೂ ಮುಸಲ್ಮಾನರ ಧಾರ್ಮಿಕ ತತ್ವಗಳನ್ನು ಒಂದುಗೂಡಿಸಿದರು. ತಮ್ಮ ಅಮರವಾದ ಹಾಡುಗಬ್ಬಗಳಿಂದ, ಈಶ್ವರನ ಏಕತ್ವವನ್ನೂ, 'ಅಲ್ಲಾ—ಅನಂತ'ರ ಏಕತ್ವವನ್ನೂ, ಹಿಂದೂ ಮುಸಲ್ಮಾನರ ಬಂಧುತ್ವವನ್ನೂ ಸ್ಥಾಪಿಸಿದರು. ಅವರು ಕನ್ನಡದಲ್ಲಿ ರಚಿಸಿರುವ ಕೀರ್ತನೆಗಳು ಮುಪ್ಪಿನ ಷಡಕ್ಷರಿ, ಸರ್ಪಭೂಷಣಸ್ವಾಮಿ, ನಿಜಗುಣ ಶಿವಯೋಗಿ, ಹರಿದಾಸರು - ಇವರ ಪಂಕ್ತಿಗೆ ಸೇರಿದುವಾಗಿವೆ. ಸರಳವಾದ ಸಾಹಿತ್ಯ, ಭವ್ಯವಾದ ಭಾವಗಳು, ನವೋನವವಾದ ತೇಜಸ್ಸು ಅವುಗಳಿಂದ ಚಿಮ್ಮುತ್ತದೆ. ಷರೀಫಸಾಹೇಬರಂತೆ ಖಾಜಾ ಅವರೆಂಬ ಜನಪದ ಕವಿಗಳು ಅನೇಕ ಹಾಡುಗಬ್ಬಗಳನ್ನೂ, ಲಾವಣಿಗಳನ್ನೂ ರಚಿಸಿ ರಾಮ, ಕೃಷ್ಣ, ಶಿವ, ಲಕ್ಷ್ಮಿ, ದುರ್ಗಿ ಮೊದಲಾದ ಹಿಂದೂ ದೇವ, ದೇವತೆಗಳನ್ನು ಸ್ತುತಿಸಿದ್ದಾರೆ. ಇಂದು ಹಲಸಂಗಿಯ ಧೂಲಾಸಾಹೇಬರು ಇದೇ ಸಂಪ್ರದಾಯವನ್ನು ಅನುಸರಿಸಿ ಕನ್ನಡದಲ್ಲಿ ಕಾವ್ಯ, ಕತೆ, ನ್ಯಾಸಗಳನ್ನು ಬರೆಯುತ್ತಿದ್ದಾರೆ.

ಕರ್ನಾಟಕದಲ್ಲಿ ಹಿಂದೂ—ಮುಸಲ್ಮಾನರ ಮಧುರಬಾಂಧವ್ಯಕ್ಕೆ ಮೈಸೂರು ಸಂಸ್ಥಾನದಲ್ಲಿ ಹಿಂದೂ ಸಂಸ್ಕೃತಿಯ ಅಚ್ಚ ಮೂರ್ತಿಗಳಾದ ಅರಸರು ಮುಸಲ್ಮಾನ ಮಂತ್ರಿಗಳಲ್ಲಿ ಅಭಿಮಾನವಿಟ್ಟಿರುವುದೇ ಗುರುತು. ಮೈಸೂರು ದಿವಾನಸಾಹೇಬರವರ ಹೃದಯವೈಶಾಲ್ಯವೂ, ಧಾರ್ಮಿಕ ಸಮಭಾವನೆಯೂ, ಕರ್ನಾಟಕದ ಬಗ್ಗೆ ಇರುವ ಅತುಲ ಅಭಿಮಾನವೂ

ಅವರನ್ನು ಕನ್ನಡಿಗರ ಪ್ರೇಮ ಗೌರವಗಳಿಗೆ ಪಾತ್ರರನ್ನಾಗಿಸಿವೆ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಪ್ರಗತಿಯಲ್ಲಿ ಅವರು ತೋರಿಸುತ್ತಿರುವ ವಿಶ್ವಾಸವೂ, ಪರಿಷತ್ತಿಗೆ ಸ್ವಹಸ್ತ ಪರಹಸ್ತ ನೀಡುತ್ತಿರುವ ಸಹಾಯವೂ ಅವರ ಕನ್ನಡ ಮಮತೆಯ ಕುರುಹುಗಳಾಗಿವೆ.

ಸಾರ್ವಜನಿಕ ಜೀವನದಲ್ಲಿ ಮತ್ತು ಸರ್ಕಾರದ ಅಧಿಕಾರದಲ್ಲಿ ಹೆಸರಾಗಿರುವ ಅನೇಕ ಮುಸಲ್ಮಾನರು ಕನ್ನಡದಲ್ಲಿ ಉತ್ತಮ ವಾಗ್ಮಿಗಳು. ಖಾನ್‌ಬಹದ್ದೂರ್ ಅಬ್ಬಾಸ್‌ಖಾನರೂ, ವಕೀಲ್ ಖಲೀಲರೂ, ಶ್ರೀ ಅಬ್ದುರ್ ರಹಮಾನ್‌ರವರೂ, ಶ್ರೀ ಮಿರ್ಜಾ ಅಜೀಜುಲ್ಲಾ ಬೇಗ್ ಅವರೂ ಮೈಸೂರಿನ ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಎಂ. ಮೇಕ್ರಿಯವರೂ ಬೆಂಗಳೂರು ಜೈಲಿನ ಅಧಿಕಾರಿಗಳಾದ ಶ್ರೀ ಟಿ. ಎಂ. ಅಮಿರ್‌ರವರೂ ಉತ್ತಮ ಭಾಷಣಗಾರರು. ನಿರರ್ಗಳವಾಗಿ, ಶ್ರಾವಕರ ಮನಸ್ಸಿನ ಮೇಲೆ ಪರಿಣಾಮವುಂಟಾಗುವಂತೆ ಕನ್ನಡದಲ್ಲಿ ಭಾಷಣ ಮಾಡಬಲ್ಲವರು.

ವಿಜಾಪುರದಿಂದ ಬಂದು ಹೈದರಾಬಾದಿನಲ್ಲಿ ನೆಲಸಿರುವ ಡಾ|| ಸಯ್ಯದ್ ಕಾಸಿಂರವರು ಕನ್ನಡ ಕಾವ್ಯಗಳ ಅಪಾರ ರತ್ನರಾಶಿಯನ್ನು ಕಾದುಕೊಂಡು ಬಂದಿದ್ದಾರೆ. ಅವರ ಪುಸ್ತಕಭಂಡಾರದಲ್ಲಿ ಸಾವಿರಾರು ವೀರಶೈವ, ಬ್ರಾಹ್ಮಣ ಕಾವ್ಯಗಳ ಹಸ್ತಪ್ರತಿಗಳಿವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶ್ರೀಗಳಾದ ಹೈದರ್, ಒಡೆಯರ್ ಇಬ್ಬರೂ ಪತ್ರಿಕಾ ವ್ಯವಸಾಯವನ್ನು ಕೈಗೊಂಡಿದ್ದಾರೆ. ಹೈದರರವರು 'ಅಂತರಂಗ' ಪತ್ರಿಕೆಯ ಸಹಾಯಕ ಸಂಪಾದಕರಾಗಿ ಕನ್ನಡ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಕಲಾ ಪ್ರಪಂಚದಲ್ಲಿ ಮುಸಲ್ಮಾನರು ಗಮನೀಯವಾದ ಸೇವೆಯನ್ನು ಕರ್ನಾಟಕಕ್ಕೆ ಸಮರ್ಪಿಸುತ್ತಿದ್ದಾರೆ. ಹುಬ್ಬಳ್ಳಿಯ ಶ್ರೀ ಕಮಡೋಳಿಯವರ 'ಪ್ರಕೃತಿ ನೋಟ'ಗಳು ಭಾರತ ವರ್ಷದ ಅನೇಕ ಚಿತ್ರಕಲಾ ಪ್ರದರ್ಶನಗಳಲ್ಲಿಯೂ, ಕೆಲವು ಅಂತರ-ರಾಷ್ಟ್ರೀಯ ಪ್ರದರ್ಶನಗಳಲ್ಲಿಯೂ ಮನ್ನಣೆಯನ್ನು ಪಡೆದಿವೆ. ಅವುಗಳ ಲಾಲಿತ್ಯ, ನಿಸರ್ಗ ಸುಭಗತೆ, ಭವ್ಯವಾದ ಆಧ್ಯಾತ್ಮಿಕ ಸಂಕೇತಗಳನ್ನು ಗಾಂಗೂಲಿ, ಆನಂದಕುಮಾರ ಸ್ವಾಮಿಗಳಂತಹ ಕಲಾವಿಮರ್ಶಕರು ಶ್ಲಾಘಿಸಿದ್ದಾರೆ.

ದಿವಂಗತ ಮಹಮ್ಮದ್ ಪೀರ್‌ರವರು ಕನ್ನಡ ನಾಟಕ ಕಲೆಗೆ ಅಪಾರವಾದ ಸೇವೆಯನ್ನು ಮಾಡಿದ್ದಾರೆ. ಸರಳ ರಗಳೆಯ ಉಚ್ಚಾರಣಾ ರೀತಿಗೆ ಅವರೇ ಆಚಾರ್ಯರು. ಬುದ್ಧ, ಮಕರಂದ, ಸುಂದರ ಮೊದಲಾದ ಹಿಂದೂ ಪಾತ್ರಗಳನ್ನು ಅವರು ಅಮೋಘವಾಗಿ ಅಭಿನಯಿಸುತ್ತಿದ್ದರು. ಎರಡು ವರ್ಷಗಳ ಹಿಂದೆ ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಅವರು ಮಾಡಿದ ಉಪನ್ಯಾಸವು ಅವರ ಕನ್ನಡ ಮಮತೆ, ಭಾಷಾ ಪಾಂಡಿತ್ಯ, ಕಲಾನೈಪುಣ್ಯಗಳ ದ್ಯೋತಕವಾಗಿತ್ತು. ಶ್ರೀಯುವರ ಗದಾಯುದ್ಧ, ನಾಟಕದಲ್ಲಿ ಶ್ರೀ ಟಿ. ಎಂ. ಅಮೀರ್ ಅವರು ದುರ್ಯೋಧನ ಪಾತ್ರವನ್ನು ವಹಿಸಿ ಜನರ ಮನಸ್ಸನ್ನು ಹಿಂಡಿದ್ದನ್ನು ನೋಡಿದವರು ಇನ್ನೂ ಮರೆತಿಲ್ಲ.

ಸಂಗೀತ ಪ್ರಪಂಚದಲ್ಲಿ ಮುಸಲ್ಮಾನರು ಹಿರಿಯ ಸ್ಥಾನವನ್ನು ಅಲಂಕರಿಸಿದ್ದಾರೆ. ಗಾಯನಾಚಾರ್ಯರಾದ ಮೈಸೂರಿನ ಅಲ್ಲಿಜಾನ್ ರವರು ಮತ್ತು ಬೆಳಗಾಂವಿ ವಿಲಾಯತ್ ಹುಸೇನ್‌ರವರು, ಧಾರವಾಡದ ಸಾರಂಗಿ ರಹಮತ್‌ಖಾನರು, ಗದಗಿನ ತಾರಾಜಾನ್, ಧಾರವಾಡದ ಅಮೀರ್, ಗೋಹರ್ ಕರ್ನಾಟಕಿ ಸೋದರಿಯರು, ಸೊಲ್ಲಾಪುರದ ಮೆಹಬೂಬ್‌ಜಾನ್‌ರವರು ಕರ್ನಾಟಕದ ಕೀರ್ತಿಯನ್ನು ಬೆಳಸುತ್ತಿದ್ದಾರೆ. ದಿವಂಗತ ಸಂಗೀತರತ್ನ ಅಬ್ದುಲ್ ಕರೀಂಖಾನರೂ, ಸಂಗೀತಾಚಾರ್ಯ ಉಲ್ಫತ್‌ಖಾನ್‌ರವರೂ ಕನ್ನಡಿಗರೇ. ಸೊಲ್ಲಾಪುರದ ಮೆಹಬೂಬ್ ಜಾನ್‌ರವರು ದಾಸರ ಕೀರ್ತನೆಗಳನ್ನು ಬಹಳ ಸುಂದರವಾಗಿ ಹಾಡಬಲ್ಲರು. ಕೆಲವು ಗ್ರಾಮಫೋನ್ ರಿಕಾರ್ಡುಗಳಲ್ಲಿಯೂ ಬಂದಿವೆ.

ಧಾರವಾಡದ ಜಿಲ್ಲಾ ವಿದ್ಯಾ ಇಲಾಖಾಧಿಕಾರಿಗಳಾದ ಶ್ರೀ ಸಯ್ಯದ್ ನೂರುಲ್ಲಾ ಸಾಹೇಬರು ಕನ್ನಡ ಸಾಹಿತ್ಯ, ಸಂಗೀತ ಪ್ರಿಯರು. ಕನ್ನಡ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳನ್ನು ಹೊಸ ಹೊಸದಾಗಿ ತೆಗೆಯುವು ದಕ್ಕೆ ತುಂಬಾ ಶ್ರಮಿಸುತ್ತಿದ್ದಾರೆ. ಧಾರವಾಡದ 'ಕಲಾಮಂಡಲ'ದ ಅಧ್ಯಕ್ಷರಾಗಿ ಸಂಗೀತ ಕಲೆಗೆ ತುಂಬ ಪ್ರೋತ್ಸಾಹ ಕೊಡುತ್ತಿದ್ದಾರೆ. ಕಾಲೇಜಿನ 'ಕರ್ನಾಟಕ ಸಂಘ'ದ ಚಟುವಟಿಕೆಗಳಲ್ಲಿ ತುಂಬ ಆಸಕ್ತಿ ವಹಿಸಿ ಸಹಕರಿಸುತ್ತಿದ್ದಾರೆ. ಧಾರವಾಡದ ಜಿಲ್ಲೆ ಕಲ್ಲಘಟಗಿಯಲ್ಲಿನ ಕನ್ನಡ ಶಾಲಾಧ್ಯಾಪಕರಾದ ಶ್ರೀ ಗೂಡೂಸಾಹೇಬರು ಕನ್ನಡದಲ್ಲಿ

ಅನೇಕ ಕವಿತೆ, ನ್ಯಾಸಗಳನ್ನು ಬರೆದಿದ್ದಾರೆ. ಇವರ ಶಿಷ್ಯರನೇಕರು ಇಂದು ಕನ್ನಡ ಸಾಹಿತ್ಯದ ಹೆಸರಾದ ಬರೆಹಗಾರರಾಗಿದ್ದಾರೆ. ಹುಬ್ಬಳ್ಳಿಯ ಮುನಿಸಿಪಲ್ ಬರೋದ ಅಧ್ಯಕ್ಷರಾದ ಶ್ರೀ ಮೆಹಬೂಬ್ ಅಲ್ಲೀಖಾನ ರವರು ಕನ್ನಡಿಗರು. ಕನ್ನಡದ ಅನೇಕ ಚಟುವಟಿಕೆಗಳಿಗೆ ಸಹಾಯ ಮಾಡುತ್ತಿದ್ದಾರೆ. ಮೈಸೂರಿನ ಪ್ರಧಾನ ನ್ಯಾಯಸ್ಥಾನದ ನ್ಯಾಯಾಧೀಶ ರಾದ ಶ್ರೀ ಅಬ್ದುಲ್ ಗನಿಯವರೂ ಅವರ ಸೋದರರೂ ಕನ್ನಡದ ಅಭಿಮಾನಿಗಳು. ಗನಿಯವರು ಚೆಲುವಾಗಿ ಕನ್ನಡ ಮಾತನಾಡಬಲ್ಲರು ಮತ್ತು ಕರ್ನಾಟಕ ಸಂಗೀತದ ಉತ್ಕಟಾಭಿಮಾನಿಗಳು. ಅವರ ಮನೆ ಯಲ್ಲಿ ಕರ್ನಾಟಕ ಸಂಗೀತದ್ದೇ ಝೇಂಕಾರ. ಬೆಂಗಳೂರಿನ ಶ್ರೀ ಎಸ್. ಎಸ್. ಎಮ್. ರಜ್ವಿಯವರು ಉತ್ತಮ ಕನ್ನಡ ವಾಗ್ಮಿಗಳು ಹಾಗೂ ಕಾಂಗ್ರೆಸ್ ಭಕ್ತರು. ಇವರ ಮಾತಿನ ಬಗೆಯಲ್ಲಿ ನಗೆಯೂ, ವಿಚಾರವೂ ತುಂಬಿ ತುಳುಕುತ್ತದೆ. ಶ್ರೀ ಗನಿಯವರಂತೆ ಈ ಎಲ್ಲಾ ಮಹನೀಯರೂ ಪರಿಷತ್ತಿನ ಸದಸ್ಯರಾಗಿ ಕನ್ನಡದ ಸಂಬಂಧವನ್ನು ಹೆಚ್ಚು ನಿಕಟವಾಗಿ ಬೆಳಸಿಕೊಳ್ಳಬೇಕೆಂದು ನಮ್ಮ ವಿನಂತಿ.

ಹಿಂದುಗಳಲ್ಲಿ ಇಸ್ಲಾಮಿನ ಸಾಹಿತ್ಯ ಸಂಸ್ಕೃತಿಗಳನ್ನು ತುಂಗಭದ್ರೆಯ ಪಂಡಿತ ತಾರಾನಾಥರಿಗಿಂತಲೂ ಚೆನ್ನಾಗಿ ಬಲ್ಲವರು ಯಾರೂ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇವರ ಪರ್ಶಿಯನ್, ಅರಾಬಿಕ್, ಉರ್ದು ಭಾಷೆಗಳ ಪಾಂಡಿತ್ಯ ಬಹಳ ಮಂದಿ ಮುಸಲ್ಮಾನ ಪಂಡಿತರಿಗೂ ಇಲ್ಲ. ಸೂಫಿ ವೇದಾಂತ, ಸೂಫಿ ಕವಿಗಳು, ಇವರುಗಳ ಬಗ್ಗೆ ಪೂರ್ಣ ಜ್ಞಾನ ವಿರುವುದಲ್ಲದೆ ಪಂಡಿತರಿಗೆ ಹಿಂದೂಸ್ಥಾನಿ ಪದ್ಧತಿಯ ಸಂಗೀತ, ವೈದ್ಯ ಗಳಲ್ಲಿ ನೈಪುಣ್ಯವಿದೆ. ಪಂಡಿತರು ಉರ್ದು ಭಾಷೆಯಲ್ಲಿ ಉದ್ದಾಮ ವಾಗ್ಮಿ ಗಳು. ಸಾಂಸ್ಕೃತಿಕವಾಗಿ ಹಿಂದೂ ಮುಸಲ್ಮಾನರಲ್ಲಿ ಬಾಂಧವ್ಯ, ಪ್ರೇಮ ಗಳು ಮೂಡಲು ಪಂಡಿತರು ಬಹಳ ಶ್ರಮಪಟ್ಟಿದ್ದಾರೆ.

ಕೆಲವು ಮುಸಲ್ಮಾನ ಕಲಾವಿದರು, ರಾಜಕಾರಣ ಪಂಡಿತರು, ವಾಗ್ಮಿಗಳು ಕನ್ನಡ ಸೇವೆಗೆ ನಿಂತರೂ ಮುಸಲ್ಮಾನ ಪ್ರಪಂಚದ ಗಮನವು ಕನ್ನಡದ ಕಡೆಗೆ ಬಿದ್ದಿಲ್ಲ. ಕನ್ನಡ ತಮ್ಮದೆಂದೂ ಕರ್ನಾಟಕ ತಮ್ಮ ಮನೆಯೆಂದೂ ಭಾವಿಸಿಕೊಂಡು ಅವರು ಹೆಚ್ಚು ಹೆಚ್ಚಾಗಿ ಕನ್ನಡ ಸೇವೆಗೆ

ಮುಂದುವರಿಯಬೇಕು. ಕನ್ನಡದಲ್ಲಿ ಇನ್ನಿದುವರೆಗೂ ಪವಿತ್ರ ಕುರಾನಿನ ಭಾಷಾಂತರವಿಲ್ಲ. ಸೂಫಿ ವೇದಾಂತವನ್ನು ತಿಳಿಸುವ ಒಂದು ಗ್ರಂಥವೂ ಇಲ್ಲ. ಈ ಕೊರತೆಯನ್ನು ನಿವಾರಿಸುವುದು ನಮ್ಮ ಮುಸಲ್ಮಾನ ಬಂಧುಗಳಿಗೆ ಸೇರಿದ ಕರ್ತವ್ಯಭಾಗ. ಕನ್ನಡಿಗರಿಗೆ ಇಸ್ಲಾಂ ಸಂಸ್ಕೃತಿಯ ಪರಿಚಯವನ್ನೂ ಮುಸಲ್ಮಾನರಿಗೆ ನಮ್ಮ ದ್ರವಿಡ ಸಂಸ್ಕೃತಿಯ ಪರಿಚಯವನ್ನೂ ಮಾಡಿಕೊಡುವುದು ಅವರ ಧರ್ಮ.

ಕೆಲವು ಕನ್ನಡ ಸಾಹಿತಿಗಳು ಈ ಕೆಲಸವನ್ನು ತಮ್ಮ ಶಕ್ತ್ಯಾನುಸಾರ ನಿರ್ವಹಿಸುತ್ತಿದ್ದಾರೆ. ಶ್ರೀ ಡಿ. ವಿ. ಗುಂಡಪ್ಪನವರು ಪರ್ಶಿಯಾ ದೇಶದ ಪ್ರಸಿದ್ಧ ಕವಿಯಾದ ಉಮ್ಮರ್ ಖಯ್ಯಾಂನ "ರುಬಾಯಿ-ಯತ್" ಕಾವ್ಯವನ್ನು ಉತ್ಕೃಷ್ಟ ರೀತಿಯಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಆ ಗ್ರಂಥದ ಮುನ್ನುಡಿಯಲ್ಲಿ ಕವಿ, ಕಾವ್ಯ, ಹಾಗೂ ಸೂಫೀ ಧರ್ಮದ ಪರಿಚಯವನ್ನು ಸ್ಥೂಲವಾಗಿ ಮಾಡಿಕೊಟ್ಟಿದ್ದಾರೆ. ಮಂಜೇಶ್ವರದ ಶ್ರೀ ಗೋವಿಂದ ಪೈಗಳವರೂ ಅದೇ ಕಾವ್ಯವನ್ನು ಪ್ರೌಢ ರೀತಿಯಲ್ಲಿ ಕನ್ನಡಿಸಿದ್ದಾರೆ. ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಹಜರತ್ ಮಹಮದ್ ಪೈಗಂಬರರವರ ಜೀವನ ಚರಿತ್ರೆಯನ್ನು ಉದಾತ್ತ ರೀತಿಯಲ್ಲಿ ಬರೆದಿದ್ದಾರೆ. ಅದನ್ನು ಓದಿದ ಒಬ್ಬ ಮುಸಲ್ಮಾನ ಪಂಡಿತರು "ಯಾವ ಮುಸಲ್ಮಾನ ತಾನೇ ಹಜರತ್ತರ ಚರಿತ್ರೆಯನ್ನು ಇದಕ್ಕಿಂತಲೂ ಚೆನ್ನಾಗಿ ಬರೆಯಬಹುದು" ಎಂದರು. ಶ್ರೀ ಜಿ. ಪಿ. ರಾಜರತ್ನಂ ಅವರು ಸಾದಿ ಕವಿಯ ಕೆಲವು ಸಣ್ಣ ಕತೆಗಳನ್ನು ಅನುವಾದಿಸಿದ್ದಾರೆ. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರು ಹಫೀಜ್ ಕವಿಯ ಗೀತಗಳ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಟ್ಟಿದ್ದಾರೆ. ಈ ಪತ್ರಿಕೆಯ ಸಂಪಾದಕರು ಅನೇಕ ಸೂಫಿ ಕವಿಗಳು, ಅವರ ತತ್ವವಿಚಾರದ ಬಗ್ಗೆ ತುಲನಾತ್ಮಕ ದೃಷ್ಟಿಯಿಂದ ಲೇಖನಗಳನ್ನು ಬರೆದಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಪರ್ಶಿಯನ್ ಪಂಡಿತರಾದ ಶ್ರೀ ಆಗಾ ಅಬ್ಬಾಸ್ ಷೂಸ್ತ್ರಿ ಅವರ 'ಇಸ್ಲಾಮಿನ ಇತಿಹಾಸ' ಎಂಬ ಗ್ರಂಥವನ್ನು ಶ್ರೀಯುವರು ಕನ್ನಡಿಸುತ್ತಿದ್ದಾರೆ. ಶ್ರೀಯುವರು, ಸಿ. ಕೆ. ವೆಂಕಟರಾಮಯ್ಯನವರು, ಈ ಪತ್ರಿಕೆಯ

ಸಂಪಾದಕರು ಉಪನ್ಯಾಸಗಳ ಮೂಲಕವಾಗಿಯೂ ಇಸ್ಲಾಮಿನ ಸಾಹಿತ್ಯ ಸಂಸ್ಕೃತಿಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುತ್ತಿದ್ದಾರೆ.

ಇದೇ ವಿಶ್ವಧರ್ಮ ದೃಷ್ಟಿಯನ್ನು ನಮ್ಮ ಮುಸಲ್ಮಾನ ಬಂಧುಗಳೂ ತೋರಬೇಕು. ಶ್ರೀ ಷೂಸ್ತ್ರಿ ಅವರು ಭಗವಾನ್ ಕೃಷ್ಣನ ಮೇಲೆ ಉಪನ್ಯಾಸಗಳನ್ನು ಮಾಡಿ ಧಾರ್ಮಿಕ ಸಮಭಾವನೆಯ ಅಡಿಗಲ್ಲನ್ನು ಹಾಕಿದ್ದಾರೆ. ಹಿಂದುಗಳು ಮಹಮದ್ ಪೈಗಂಬರರ ಜನ್ಮದಿನೋತ್ಸವವನ್ನೂ ಮುಸಲ್ಮಾನರು ಕೃಷ್ಣಜಯಂತಿಯನ್ನೂ ಆಚರಿಸಬೇಕು.

ಕರ್ನಾಟಕವು ರಾಜಕೀಯ, ಸಾಮಾಜಿಕ, ಕಲಾ, ಸಾಹಿತ್ಯ ಜಗತ್ತುಗಳಲ್ಲಿ ಮಾದರಿಯೆನಿಸಿಕೊಂಡಿರುವಂತೆ ಧಾರ್ಮಿಕ ಸೌಜನ್ಯದಲ್ಲಿಯೂ ಮಾದರಿಯೆನಿಸಿಕೊಂಡಿದೆ. ಪ್ರಕೃತಿಶೋಭೆಯಿಂದ ತುಂಬಿದ ಈ ನಾಡು ಮೊದಲಿಂದಲೂ ಅನೇಕ ಧಾರ್ಮಿಕ ಕ್ರಾಂತಿಗಳಿಗೂ, ಧರ್ಮೋದ್ಧರಣಗಳಿಗೂ ತೌರೂರೆನಿಸಿದೆ. ತ್ರಿಮತಾಚಾರ್ಯರೂ, ಶ್ರೀ ಬಸವೇಶ್ವರರೂ, ಜೈನ ಧರ್ಮಾಚಾರ್ಯರೂ ವಿಕಸಿಸಿ ತಮ್ಮ ಧರ್ಮವನ್ನು ಪಸರಿಸಿದ ಪವಿತ್ರ ಭೂಮಿ ಇದು. ಮುಂದಿನ ಜಗತ್ತಿನ ಧರ್ಮವಾಗುವ ವಿಶ್ವಮೈತ್ರಿ-ವಿಶ್ವಪ್ರೇಮಗಳನ್ನು ಬೆಳಸಲು ಕರ್ನಾಟಕಕ್ಕಿಂತಲೂ ಫಲವತ್ತಾದ, ಕೃಷಿ ಮಾಡಿದ ಭೂಮಿ ಬೇರೊಂದಿಲ್ಲ. ಕರ್ನಾಟಕವು ಅಂತಹ ಧರ್ಮದ ಹುಟ್ಟೂರು ಆಗಲೆಂದೇ ನಮ್ಮ ಬಯಕೆ.

ಇದಕ್ಕೆ ಹಿಂದುಗಳು, ಮುಸಲ್ಮಾನರು ಧರ್ಮದ ಹೆಸರಿನಲ್ಲಿ ತಾವು ಬಿಮ್ಮನೆ ಬಿಗಿದಪ್ಪಿರುವ ಮೂಢಭಾವನೆಗಳನ್ನೂ ತಪ್ಪು ಅಭಿಪ್ರಾಯಗಳನ್ನೂ ದೂರಮಾಡಬೇಕು. ಕನ್ನಡ ನಾಡನ್ನೇ ತಮ್ಮ ಆರಾಧ್ಯ ದೈವವನ್ನಾಗಿ ಮಾಡಿಕೊಂಡು ಒಮ್ಮನದಿಂದ ವಿಶ್ವಧರ್ಮದ ಆರಾಧಕರಾಗಬೇಕು. ಅಂತಹ ಸುವರ್ಣ ದಿವಸಗಳು ಬೇಗ ಬರಲೆಂದು ಬಯಸುವ ; ಅದಕ್ಕಾಗಿ ದುಡಿಯುವ.

ಕನ್ನಡ ನುಡಿ ೪-೧೧-೩೮

---

# ೯. ಹಿಂದಿಗೆ ಪ್ರಾಮುಖ್ಯತೆ

ಮೈಸೂರು ವಿಶ್ವವಿದ್ಯಾನಿಲಯದ ಸಾಮಾನ್ಯ ಸೆನೇಟ್ ಮೀಟಿಂಗ್ಸು ನಿನ್ನೆ [೨೫-೧೧-೩೬] ಮಧ್ಯಾಹ್ನ ೧೨ ಗಂಟೆಗೆ ಸರಿಯಾಗಿ ಯೂನಿಯನ್ ಹಾಲಿನಲ್ಲಿ ಉಪಕ್ರಮವಾಯಿತು. ವೈಸ್‌ಛಾನ್ಸೆಲರ್ ಡಾ|| ಇ. ಪಿ. ಮೆಟ್‌ಕಾಫ್‌ರವರು ಅಧ್ಯಕ್ಷತೆಯನ್ನು ವಹಿಸಿದ್ದರು.

ಶ್ರೀ ಎ. ಆರ್. ವಾಡಿಯಾರವರು ಹಿಂದಿಯನ್ನು ವಿಶ್ವವಿದ್ಯಾನಿಲಯದಲ್ಲಿ ಪೋಷಿಸುವ [ಡಿಗ್ರಿ ಕೋರ್ಸುಗಳಲ್ಲಿ] ಬಗ್ಗೆ ವಿಷಯವನ್ನು ಸೂಚಿಸಿ ಉದಾತ್ತ ಭಾಷಣಮಾಡಿದರು. ಅವರು ಹೇಳಿದುದೇನೆಂದರೆ—

"ಭಾರತದಲ್ಲಿ ಹಿಂದೀ ಪ್ರಾಶಸ್ತ್ಯವು ಹೆಚ್ಚುತ್ತಿರುವುದು. ಭಾರತೀಯರು ಹಿಂದೀ ಬಗ್ಗೆ ಹೆಚ್ಚು ಪ್ರೀತಿಯನ್ನು ಬೆಳಸುತ್ತಿರುವರು. ಹಿಂದಿಯ ಪ್ರಾಮುಖ್ಯತೆಯಾದರೂ ಹೆಚ್ಚಾಗಿರುವುದು. ವಿಶ್ವವಿದ್ಯಾನಿಲಯದವರು ಅದಕ್ಕೆ ಅವಕಾಶ ಕೊಡುವುದು ಅಗತ್ಯವಾಗಿರುವುದು. ಹಿಂದೀಯನ್ನು ಪೋಷಿಸಬೇಕೆಂದು ವಿಶ್ವವಿದ್ಯಾನಿಲಯದವರು ಒಪ್ಪಿರುವರು, ಅದನ್ನು ಕಾರ್ಯಗತ ಮಾಡುವುದು ಅಗತ್ಯ" ಈ ವಿಷಯವನ್ನು ಶ್ರೀ ಜೆ. ಸಿ. ರೋಲೋರವರು ಅನುಮೋದಿಸಿದರು.

ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಈ ವಿಷಯವನ್ನು ಮೊದಲು ವಿರೋಧಿಸಿದರು. ಅವರು ಹಿಂದೀ ಮತ್ತು ಕನ್ನಡದ ಸ್ಥಾನಗಳನ್ನು ವಿವರಿಸಿ, ವಿಶ್ವವಿದ್ಯಾನಿಲಯದವರು ಕನ್ನಡದ ಜೊತೆಗೆ ಅನೇಕ ಭಾಷೆಗಳನ್ನು ಸೆಕೆಂಡ್ ಲಾಂಗ್ವೇಜಾಗಿ ಅನುಸರಿಸುತ್ತಿರುವರೆಂದೂ, ಹಿಂದಿಯನ್ನು ಕಲಿಯುವುದಕ್ಕೆ ತಾವು ಆಕ್ಷೇಪಿಸುವುದಿಲ್ಲವೆಂದೂ, ವಿಶ್ವವಿದ್ಯಾನಿಲಯದವರು ಅನುಸರಿಸಬೇಕೆಂದು ಒತ್ತಾಯಮಾಡುವಷ್ಟು ಹಿಂದೀಗೆ ಪ್ರಾಮುಖ್ಯತೆಯಿಲ್ಲವೆಂದೂ ಹೇಳಿದರು.

ಸಾಮಾನ್ಯ ಪ್ರಜಾಶಿಕ್ಷಣವನ್ನು ಪ್ರಸ್ತಾಪಿಸಿ, ಶ್ರೀ ವೆಂಕಟನಾರಾಯಣಪ್ಪನವರು ಕನ್ನಡ ದೇಶದ ಕೇಂದ್ರವಾದ ಮೈಸೂರಿನಲ್ಲಿ ಕನ್ನಡದ ತಿಳುವಳಿಕೆಯನ್ನು ಹರಡತಕ್ಕದ್ದೆಂದೂ, ಕನ್ನಡವೇ ಕ್ಷೀಣಿಸುತ್ತಿರುವಾಗ, ಹಿಂದೀಗೆ ಪ್ರೋತ್ಸಾಹವನ್ನು ಕೋರುವುದು ತರವಲ್ಲವೆಂದೂ, ಹಿಂದೀಗೆ

ಪ್ರಾಶಸ್ತ್ಯವನ್ನು ಕೊಡಲು ಇನ್ನೂ ಮುಂದುವರಿಯುವುದಾದರೆ, ಕನ್ನಡ ವನ್ನು ಕೇಳುವವರೇ ಇರುವುದಿಲ್ಲವೆಂದೂ, ಈ ವಿಷಯವನ್ನು ಕೆಲವು ವರ್ಷ ಗಳವರೆಗೆ ಮುಂದುವರಿಸುವುದು ಮೇಲೆಂದೂ ಅಭಿಪ್ರಾಯಪಟ್ಟರು.

ಶ್ರೀ ಕೆ. ಎಸ್. ಕೆ. ಅಯ್ಯಂಗಾರ್‌ರವರು, ಶ್ರೀ ಬಿ. ವೆಂಕಟ ನಾರಾಯಣಪ್ಪನವರು ಕನ್ನಡವು ಹಿಂದೀಯಿಂದ ನಶಿಸಿಹೋಗುವುದೆಂದು ಹೇಳಿದುದಕ್ಕೆ ಆಶ್ಚರ್ಯಪಟ್ಟರು. ತಾವು ಕನ್ನಡಿಗರೆಂದೂ, ಕನ್ನಡ ಪ್ರೇಮಿಗಳೆಂದೂ, ಆದರೂ ಹಿಂದೀ ಶಿಕ್ಷಣದಲ್ಲಿ ವಿಶ್ವಾಸವುಳ್ಳವರೆಂದೂ, ಹಿಂದೀಯಿಂದ ಕಲಿಯಬೇಕಾದುದು ಅನೇಕವಿರುವುದೆಂದೂ ಅವರು ಹೇಳಿದರು.

ಶ್ರೀ ಡಿ. ವಿ. ಗುಂಡಪ್ಪನವರು ವಿಷಯವನ್ನು ವಿರೋಧಿಸಿ ಮಾತ ನಾಡಿದರು.

ಎಸ್. ಎಸ್. ಎಲ್. ಸಿ. ಯಲ್ಲಿ ವಿದ್ಯಾರ್ಥಿಗಳು ಹಿಂದೀ ವ್ಯಾಸಂಗ ಮಾಡಿ, ಕಾಲೇಜಿನಲ್ಲಿ ಕೂಡ ಅದೇ ಸೌಕರ್ಯವನ್ನು ಪಡೆಯಬೇಕೆಂದು ಹೇಳುವುದು ಅನಗತ್ಯವೆಂದೂ, ಇಲ್ಲಿ ಡಿ. ಪಿ. ಐ. ನೀತಿಯನ್ನು ಪರಿಶೀಲಿಸು ವುದು ಬೇಕಿಲ್ಲವೆಂದೂ ಹೇಳಿದರು.

ಶ್ರೀ ಗುಂಡಪ್ಪನವರು ಕನ್ನಡ, ಸಂಸ್ಕೃತ ಮತ್ತು ಹಿಂದೀ ಭಾಷೆ ಗಳು ಮೈಸೂರಿನಲ್ಲಿ ಯಾವ ಯಾವ ಸ್ಥಾನಗಳನ್ನು ಪಡೆದಿರುವುವೆಂಬುದನ್ನು ತಿಳಿಸಿದರು-

"ಭಾರತದಲ್ಲಿ ಇಂಗ್ಲೀಷೆ ಪ್ರಧಾನ ಭಾಷೆ ಎಂಬುದನ್ನು ಸರ್ಕಾರ ದವರು ತೀರ್ಮಾನಿಸಿರುವರು. ಹಿಂದಿಯು ಇತರ ಒಂದೆರಡು ಭಾಷೆ ಗಳೊಡನೆ ರಾಷ್ಟ್ರೀಯ ಭಾಷೆ ಎಂದು ಗಣಿಸಲರ್ಹವಾದುದು. ಹಿಂದೀ ಮತ್ತು ಉರ್ದು ಬಗ್ಗೆ ಈಗ ಪ್ರಶ್ನೆ ಎದ್ದಿದೆ. ಉರ್ದುವು ರಾಷ್ಟ್ರಭಾಷೆ ಯಾಗುವುದೋ ಅಥವಾ ಹಿಂದಿಯು ರಾಷ್ಟ್ರಭಾಷೆಯಾಗುವುದೋ ಈಗ ಹೇಳುವುದು ಸಾಧ್ಯವಿಲ್ಲ. ವಿಶ್ವವಿದ್ಯಾನಿಲಯವು 'ಫಾಲೋ-ಆನ್' ಕೋರ್ಸುಗಳನ್ನು ಅನುಸರಿಸುವುದು ಸಾಧ್ಯವಿಲ್ಲ" ಎಂದು ಶ್ರೀ ಡಿ. ವಿ. ಗುಂಡಪ್ಪನವರು ಹೇಳಿದರು.

ಮಿ|| ಜೆ. ಮಹಮದ್ ಇಮಾಂರವರು ವಿಷಯವನ್ನು ಸಮರ್ಥಿಸಿ, ಭಾರತಕ್ಕೆ ರಾಷ್ಟ್ರಭಾಷೆಯ ಒತ್ತಾಯವು ವಿಪರೀತವಾಗಿದೆ. ಹಿಂದಿಯು ಅದಕ್ಕೆ ಯೋಗ್ಯವೆಂದು ಒಪ್ಪಲಾಗಿದೆ. ಅಂತಹ ಭಾಷೆಗೆ ಮೈಸೂರಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪುರಸ್ಕಾರವಿರಬೇಕು. ಮೈಸೂರಿನವರೆಲ್ಲರೂ ಅದನ್ನು ವ್ಯಾಸಂಗಮಾಡುವುದು ಅಗತ್ಯವಾಗಿದೆ ಎಂದರು.

ಶ್ರೀ ಎಸ್. ಹಿರಿಯಣ್ಣನವರು ಹಿಂದಿಯನ್ನು ಡಿಗ್ರಿ ಕೋರ್ಸಿನಲ್ಲಿ ತರುವುದಕ್ಕೆ ಖರ್ಚು ಏನಾಗುವುದೆಂದು ಕೇಳಿದರು. ಉತ್ತರವಾಗಿ ಅಧ್ಯಕ್ಷರು ಒಬ್ಬ ಲೆಕ್ಚರರ್ ಬೇಕಾಗುವುದೆಂದು ಹೇಳಿದರು.

ಶ್ರೀ ವಿ. ಲಿಂಗಪ್ಪಯ್ಯನವರು ವಿಷಯವನ್ನು ವಿರೋಧಿಸಿದರು. ವಿಶ್ವವಿದ್ಯಾನಿಲಯಗಳಲ್ಲಿ ಸಾಂಸ್ಕೃತಿಕ ವ್ಯಾಸಂಗಕ್ಕೆ ಪ್ರಾಶಸ್ತ್ಯವಿರುವುದೆಂದೂ, ಭಾಷೆಯ ಪ್ರಾಶಸ್ತ್ಯ ದೃಷ್ಟಿಯಲ್ಲಿ ಹಿಂದಿಯನ್ನು ತಾವು ಈಗ ಗಮನಿಸುವುದು ಅಗತ್ಯವಿಲ್ಲವೆಂದೂ, ವಿಷಯವನ್ನು ಮುಂದೆ ಯಾವಾಗಲಾದರೂ ಪರಿಶೀಲಿಸಬಹುದೆಂದೂ ತಿಳಿಸಿದರು.

ಶ್ರೀ ಡಿ. ಎಸ್. ಮಲ್ಲಪ್ಪನವರು ತಾವು ಕನ್ನಡ ಪ್ರೇಮಿಗಳಾದರೂ, ಹಿಂದಿಯನ್ನು ಅಗತ್ಯವಾಗಿ ಪೋಷಿಸಬೇಕೆಂದು ಅಭಿಪ್ರಾಯಪಟ್ಟರು.

ಶ್ರೀ ವೆಂಕಟೇಶಯ್ಯನವರು ವಿಷಯವನ್ನು ಸಮರ್ಥಿಸಿ ಭಾಷಣ ಮಾಡಿದರು.

ಶ್ರೀ ಎನ್. ಎಸ್. ಸುಬ್ಬರಾಯರು ವಿಷಯವನ್ನು ಸಮರ್ಥಿಸಿ ಭಾಷಣಮಾಡಿದರು. ವಿಶ್ವವಿದ್ಯಾನಿಲಯದ ಅನುಕೂಲ ದೃಷ್ಟಿಯಲ್ಲಿ ಅದನ್ನು ಪೋಷಿಸಬೇಕೆಂದು ಅಭಿಪ್ರಾಯಪಟ್ಟರು.

"ಭಾರತದಲ್ಲಿ ಈಗ ಹಿಂದಿಗೆ ಅತ್ಯಾವಶ್ಯಕವಿದೆ. ಅದನ್ನು ಅಭ್ಯಾಸ ಮಾಡುವುದಕ್ಕೆ ಒತ್ತಾಯವಿದೆ. ಆದುದರಿಂದ ಸಂಸ್ಕೃತಿಯು ಬೆಳೆಯಲು ಅಡಚಣೆಯಾಗುವುದಿಲ್ಲ, ಅನುಕೂಲವಾಗುತ್ತದೆ. ಕನ್ನಡಿಗರ ದೃಷ್ಟಿಯಲ್ಲಿ ಈ ವಿಷಯಕ್ಕೆ ವಿರೋಧವನ್ನು ತೋರಿಸುವುದು ಕೂಡಾ ಅಗತ್ಯವಿಲ್ಲ. ಕನ್ನಡಿಗರು 'ಇಙ್ಫೀರಿಯಾರಿಟಿ ಕಾಂಪ್ಲೆಕ್ಸ್'ನಿಂದ ಇರುವರು. ಅವರು ಅದನ್ನು ನೀಗುವುದು ಅಗತ್ಯವಿದೆ. ಹಿಂದಿಗೆ ನಾವು ಬೆಂಬಲವನು ಕೊಡಲು ಸಾವಕಾಶ ಮಾಡಬೇಕಾಗಿಲ್ಲ" ಎಂದು ಹೇಳಿದರು.

ಶ್ರೀ ಎ. ಆರ್. ವಾಡಿಯಾರವರು ವಿಷಯದ ಬಗ್ಗೆ ನಡೆದ ಭಾಷಣಗಳಿಗೆ ಸಂತೋಷವನ್ನು ಸೂಚಿಸಿ, "ಹಿಂದಿಯನ್ನು ಕನ್ನಡಕ್ಕೆ ಬದಲಾಗಿ ವಿಶ್ವವಿದ್ಯಾಲಯವು ಪೋಷಿಸಬೇಕೆಂದು ಈಗ ಕೇಳಿಲ್ಲ. ಹಿಂದೀ-ಕನ್ನಡ ಸಮಸ್ಯೆಗೆ ಇಲ್ಲಿ ಅವಕಾಶವೇ ಇಲ್ಲ. ಹಿಂದಿಯು ಭಾರತದಲ್ಲಿ ಮೆಜಾರಿಟಿಯಲ್ಲಿರುವುದು ಅದರ ಗೌರವತೆಯನ್ನು ನಾವು ಗಮನಿಸದಿರಕೂಡದು. ಶ್ರೀ ಡಿ. ವಿ. ಗುಂಡಪ್ಪನವರು ಫಾಲೋ-ಅರ್ ಕೋರ್ಸಿಗೆ ವಿರೋಧವನ್ನು ಸೂಚಿಸಿದರು. ಆದರೆ ನಾನು ಫಾಲೋ-ಅರ್ ಕೋರ್ಸು ಇರಬೇಕೆಂದೇ ಹೇಳುತ್ತೇನೆ, ವಿಶ್ವವಿದ್ಯಾಲಯದವರು ವಿದ್ಯಾರ್ಥಿಗಳಿಗೆ ಹಿಂದಿಯನ್ನು ಕಲಿಯಲು ಅವಕಾಶ ಕೊಡಬೇಕು ಎಂದರು.

ಈ ವಿಷಯವು ಓಟಿಗೆ ಹಾಕಲ್ಪಟ್ಟಾಗ ಅಧಿಕ ಮತದೊಡನೆ [೫ ವಿರೋಧ ಓಟುಗಳು] ಅಂಗೀಕೃತವಾಯಿತು.

ತಾಯಿನಾಡು.

ಮೇಲೆ ಪ್ರಕಟವಾಗಿರುವ ವಿಶ್ವವಿದ್ಯಾನಿಲಯದ ಸೆನೆಟ್ ಮೀಟಿಂಗಿನ ವರದಿ ಕನ್ನಡ ಪ್ರೇಮಿಗಳನ್ನು ಬೆಕ್ಕಸಬೆರಗುಗೊಳಿಸದಿರದು. ಕಾಂಗ್ರೆಸ್, ಮಹಾತ್ಮಾಜಿ, ರಾಷ್ಟ್ರೀಯತೆಗಳನ್ನು ಮುಂದೆಮಾಡಿಕೊಂಡು ಸ್ತ್ರೀ ಜನತೆಯ ಸರಳ ವಿಶ್ವಾಸದ ಮೇಲೆ ಬೆಳೆಯುತ್ತಿದ್ದ ಹಿಂದಿ ಇಂದು ವಿಶ್ವವಿದ್ಯಾನಿಲಯದಲ್ಲಿಯೂ ತನ್ನ 'ಜಯಭೇರಿ'ಯನ್ನು ಹೊಡೆದಿದೆ. ಕೊಂಚ ನೆಳಲನ್ನು ಕೇಳಬಂದ ಒಂಟೆಯು ಇಂದು ಗುಡಿಸಲ ಒಳಗೆ ನುಗ್ಗಿದೆ; ಮುಂದೆ ಗಡಿಸಲ ಯಜಮಾನನನ್ನು ಹೊರಗೆ ಹಾಕುವುದಿಲ್ಲವೆನ್ನುವುದಕ್ಕೆ ಏನು ಆಧಾರ! ಪ್ರೊ. ವಾಡಿಯಾರವರೂ, ಅವರ ಮತಾನುಮೋದಕರೂ ಹಿಂದಿಯು ಕನ್ನಡದ ಸ್ಥಾನವನ್ನು ಆಕ್ರಮಿಸುವುದಿಲ್ಲ. ಅದು ಕನ್ನಡದ ಸೋದರಿಯಂತೆ ಬೆಳೆಯಲು ಅವಕಾಶ ಕೊಡಿ ಎಂಬ ಪಲ್ಲವಿಯನ್ನು ಇಂದೂ ಹಾಡುತ್ತಿದ್ದಾರೆ. ಪ್ರೊ. ವಾಡಿಯಾರವರ ದೃಷ್ಟಿಪಥವು ನಮಗೆ ಆಶ್ಚರ್ಯವನ್ನುಂಟುಮಾಡುವುದಿಲ್ಲ. ಅವರಿಗೆ ಕನ್ನಡ ಪ್ರೇಮ ಹೇಗೆ ಬರಬೇಕು? ಕನ್ನಡದ ಕಷ್ಟ ಸುಖಗಳು ಅವರಿಗೆ ಹೇಗೆ ಅರ್ಥವಾಗಬೇಕು? ಆದರೆ ಅವರ ಹೆಜ್ಜೆಗೆ ಗೆಜ್ಜೆ ಕಟ್ಟಿ ಕುಣಿಯುತ್ತಿರುವ ಇತರ 'ಕನ್ನಡ ಅಭಿಮಾನಿ'ಗಳ ಮನೋವೃತ್ತಿ ಮಾತ್ರ ನಮಗೆ ಆಶ್ಚರ್ಯವನ್ನುಂಟು

ಮಾಡಿದೆ. ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ವಿಶ್ವವಿದ್ಯಾನಿಲಯ. ಅದರ ಸೂತ್ರಚಾಲಕರ ಮನೋವೃತ್ತಿ ಹೇಗಿದೆ; ಕನ್ನಡಕ್ಕೆ ಇಷ್ಟು ಹಿತಕರವಾಗಿದೆ.

ಹಿಂದಿಯ ಪ್ರಸಾರವನ್ನು ವಿಶ್ವವಿದ್ಯಾನಿಲಯದವರು ಕೈಗೆ ತೆಗೆದು ಕೊಂಡು ಅದನ್ನು ಒತ್ತಾಯಮಾಡುವ ಚಿತ್ತವೃತ್ತಿಯನ್ನೇ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರು ವಿರೋಧಿಸಿದುದು. ಹಿಂದಿಯು ಮೊದಲು ಕಾಲು ಹಾಕಿದುದು ಕೇವಲ ವ್ಯವಹಾರಿಕ ಭಾಷೆಯಾಗಿ; ಈಗ ಅದು ಆಶಿಸುತ್ತಿರುವುದು ದೇಶಭಾಷೆಗಳ ಸಮಾನವಾದ ಸ್ಥಾನ; ಮುಂದೆ ಅದು ಆಕ್ರಮಿಸುವುದು ದೇಶಭಾಷೆಗಳನ್ನು ಮೆಟ್ಟಿದ ಅಗ್ರಪೀಠ.

ಆದರೆ ಈ ಹಿಂದಿಗೆ ಅಸ್ತಿತ್ವವುಂಟೆ? ಇಲಾಹಾಬಾದ್, ಬನಾರಸ್ ಗಳ ಹಿಂದಿಗಳು ಒಂದೇ ಭಾಷೆಯೇ? ದ್ರವಿಡ ಭಾಷೆಗಳಿಗೆ ಸರಿಗಟ್ಟುವ ಸಾಂಸ್ಕೃತಿಕ ಸಾಹಿತ್ಯ ಭಂಡಾರವದಕ್ಕಿದೆಯೇ? ದ್ರವಿಡ ಭಾಷೆಗಳಿಗೆ ಇಂದು ಕಲಿಸಬಹುದಾದ ಸಂಪತ್ತಿದೆಯೇ ಎಂಬೆಲ್ಲ ಪ್ರಶ್ನೆಗಳು ಸಹಜವಾಗಿ ತಲೆದೋರುತ್ತವೆ. ಈ ಪ್ರಶ್ನೆಗಳನ್ನು ರಾಷ್ಟ್ರಪತಿ ಪಂಡಿತ ಜವಾಹಿರ ಲಾಲರೇ ಒಮ್ಮೆ ಎತ್ತಿದ್ದಾರೆ. ಇಂದು ಹಿಂದಿಗೆ ನಿಷ್ಕೃಷ್ಟವಾದ ಅಸ್ತಿತ್ವ ವಿಲ್ಲ. ಒಂದೆಡೆಯ ಜನ ಶೇಕಡ ೮೦-೯೦ ರಷ್ಟು ಉರ್ದು ಸೇರಿಸುತ್ತಾರೆ. ಮತ್ತೊಂದೆಡೆಯ ಜನ ಅಷ್ಟೇ ಪ್ರಮಾಣದಲ್ಲಿ ಸಂಸ್ಕೃತ ಬೆರಸುತ್ತಾರೆ. ಒಂದು ಭಾಗದ ಜನ ಹಿಂದಿಯ ಲಿಪಿ ದೇವನಾಗರಿಯಾಗಬೇಕೆನ್ನುತ್ತಾರೆ. ಇನ್ನೊಂದು ಭಾಗದ ಜನ ಹಿಂದಿಯ ಲಿಪಿ ಉರ್ದುವಾಗಬೇಕೆನ್ನುತ್ತಾರೆ. ಭಾಷೆಯಲ್ಲಿಯೇ ಈ ತೊಡಕಿರುವಾಗ ಇನ್ನು ಸಾಹಿತ್ಯದ ತೊಡಕುಗ ಳೆಷ್ಟೆಂದು ಹೇಳಬೇಕಾಗಿಯೇ ಇಲ್ಲ. ಹಿಂದಿ ಭಾಷೆಯ ನವೀನತೆಗೂ, ಅದ ರಲ್ಲಿರುವ ಕೆಲವು ಸುಂದರ ಹೊದಿಕೆಯ ಮಾಸಪತ್ರಿಕೆಗಳಿಗೂ, ಹಿಂದಿಯನ್ನೆ ಮಾತೃಭಾಷೆಯಾಗಿಯುಳ್ಳ ಜನದ ಮಾತಿಗೂ ಇಂದು ನಮ್ಮ ಜನ ಮರುಳಾಗುತ್ತಿದ್ದಾರೆ. ಇದುವರೆವಿಗೆ ಇಂಗ್ಲೀಷಿನ ಮೋಹಕ್ಕೆ ತುತ್ತಾಗಿ ಮಾತೃಭಾಷೆಯ ಬೆಳವಳಿಗೆಯನ್ನು ಬಲಿಕೊಟ್ಟಿದ್ದೆವು. ಇನ್ನು ಹಿಂದಿಯ ಮೋಹಕ್ಕೆ ತುತ್ತಾಗಿ ಆ ಬಲಿಯನ್ನು ಮುಂದುವರಿಸುತ್ತಿದ್ದೇವೆ. ಕನ್ನಡ ದಲ್ಲಿ ಹುಟ್ಟುತ್ತಿರುವ ಉತ್ಕೃಷ್ಟ ಸಾಹಿತ್ಯ ರಾಶಿಗೆ ಪ್ರೋತ್ಸಾಹವಿಲ್ಲದೆ

ಕನ್ನಡ ಗ್ರಂಥಕಾರರು ಬಸವಳಿಯುತ್ತಿರುವಾಗ ಹಿಂದಿಯ ಗ್ರಂಥಗಳನ್ನು ಪ್ರಸಾರಮಾಡುತ್ತಿದ್ದೇವೆ. ಕನ್ನಡ ವಿಶ್ವವಿದ್ಯಾನಿಲಯವನ್ನು ಕ್ರಮ ಕ್ರಮೇಣ 'ಹಿಂದಿ ವಿಶ್ವವಿದ್ಯಾನಿಲಯು'ವನ್ನಾಗಿ ಮಾರ್ಪಾಡು ಮಾಡು ತ್ತಿದ್ದೇವೆ.

ಈಗಿರುವ ಐಚ್ಛಿಕ ಭಾಷೆಗಳ ಜತೆಗೆ ಸೇರುವ ಯೋಗ್ಯತೆ ಹಿಂದಿ ಗಿದೆಯೋ ಎಂದು ವಿಶ್ವವಿದ್ಯಾನಿಲಯವು ಮೊದಲು ಯೋಚಿಸಬೇಕಾಗಿತ್ತು. ಆ ಯೋಗ್ಯತೆಯನ್ನು ಒಪ್ಪಿಕೊಂಡರೂ ಅದರ ಪ್ರಸಾರಕ್ಕೆ ಇಂತಹ ಉತ್ಸಾಹವನ್ನು ತೋರುವ ಅವಶ್ಯಕತೆ ಇರಲಿಲ್ಲ. ಹಿಂದೆ ಫ್ರೆಂಚು ಯಾವ ತ್ರಿಶಂಕು ಸ್ವರ್ಗಕ್ಕೆ ನಮ್ಮ ವಿದ್ಯಾರ್ಥಿಗಳನ್ನು ಕರೆದೊಯ್ಯಿತು, ಹಿಂದಿಯೂ ಒಯ್ಯುವುದಾದರೂ ಅವರನ್ನು ಅಲ್ಲಿಗೇ! ವಿದ್ಯಾರ್ಥಿಯು ಹೊಸ ಭಾಷೆಯ ಮೇಲಣ ಮೋಹದಿಂದ ಕನ್ನಡವನ್ನು ಬಿಟ್ಟು ಹಿಂದಿಗೆ ಹೋಗುತ್ತಾನೆ. ಇತ್ತ ಕನ್ನಡ ತಪ್ಪುತ್ತದೆ; ಅತ್ತ ಹಿಂದಿ ಬರುವುದಿಲ್ಲ. ಬಂದರೂ ಲಾಭವಿಲ್ಲ. ಅದನ್ನು ಬೆಳೆಸುವ, ಪೋಷಿಸುವ ಅನುಕೂಲವಿಲ್ಲ. ತಾನು ಹಿಂದಿ ಕಲಿತ ತಪ್ಪಿಗೆ ಮನೆ ಮಂದಿಗೆಲ್ಲಾ ಹಿಂದಿಯನ್ನು ಹಚ್ಚು ತ್ತಾನೆ. ಕೆಲವರ್ಷಗಳು ಕಳೆದ ಮೇಲೆ ಇದರಿಂದಾಗುವ ಘೋರ ಪರಿ ಣಾಮವನ್ನು ಮನೆಮನೆಯಲ್ಲಿಯೂ ಕಾಣಬಹುದು.

ಯೋಗ್ಯತೆ, ಸಾಹಿತ್ಯ, ಸಂಸ್ಕೃತಿಗಳ ಬಂಡವಾಳ, ಭಾಷಾಸೌಂದರ್ಯ ಗಳ ದೃಷ್ಟಿಯಿಂದ ಹೋರಾಡಲು ಬರುವ ಯಾವ ಭಾಷೆಗೂ (ಹಿಂದಿಗಂತೂ ಖಂಡಿತವಾಗಿಯೂ ಅಲ್ಲ) ಕನ್ನಡವು ಹೆದರಬೇಕಾಗಿಲ್ಲ, ಆದರೆ ಹಿಂದಿಗೆ ಹೆದರಬೇಕಾಗಿದೆ. ಇದರ ಹಾದಿ ವಿದ್ಯಾ ಸಂಸ್ಕೃತಿಗಳ ಹಾದಿಯಲ್ಲ, ಹವೀನತೆಯ ಹಾದಿ! ಹಿಂದಿಯ ಪ್ರಸಾರ ಮಾಡುವವರು ಯಾರೂ ಅದರ ಯೋಗ್ಯತೆಯನ್ನು ಕುರಿತು ಪ್ರಸ್ತಾಪಿಸುವುದೇ ಇಲ್ಲ. ಮಾತುಮಾತಿಗೂ ಕಾಂಗ್ರೆಸ್, ರಾಷ್ಟ್ರಧರ್ಮಗಳನ್ನು ಮುಂದು ಮಾಡುತ್ತಾರೆ. ಇದು ವಿದ್ಯೆಯ ಬುನಾದಿಯನ್ನು ಅಲುಗಿಸುವ ಕೌಟಿಲ್ಯವೆಂಬುದನ್ನು ಮರೆಯಬಾರದು. ಕನ್ನಡ ಭಕ್ತರು ಹಿಂದಿಯನ್ನೆದುರಿಸಿದಾಗ ಹಿಂದಿಯ ಕಡುಗಲಿಗಳು ವೀರರಂತೆ ಕಾದುವುದಿಲ್ಲ. ಅವಕಾಶ ಕಾದು ಸಣ್ಣ ಪುಟ್ಟ ಕಿರು[illegible]ಗಳ ನ್ನಿತ್ತು ತೃಪ್ತರಾಗುತ್ತಾರೆ.

ಕನ್ನಡಿಗರ ನಿರಭಿಮಾನ ಎಂದು ನೀಗುವುದು? ಹಿಂದಿಯಿಂದು ಕನ್ನಡ ವಿದ್ಯೆಯ ಬುನಾದಿಯನ್ನೇ ಅಲುಗಿಸುತ್ತಿದೆ—ಆದರೂ ಕನ್ನಡಿಗರು ಆಲಸಿಗರಾಗಿರುವುದೇಕೆ?

ವಾಣಿಜ್ಯದಲ್ಲಿ, ಕೈಗಾರಿಕೆಗಳಲ್ಲಿ 'ರಕ್ಷಣೆ'ಯುಂಟು. ಸಣ್ಣ ಪುಟ್ಟ ಬಂಡವಾಳಗಾರರನ್ನು ಸಂಕಲಿತ ಬಂಡವಾಳದಿಂದ ರಕ್ಷಿಸುವ ಆರ್ಥಿಕ ಆಯುಧವುಂಟು. ಭಾಷೆ, ಸಂಸ್ಕೃತಿ, ಕಲೆಗಳಿಗೆ ರಕ್ಷಣೆ ಬೇಡವೇ? ಪೋಷಣೆ ಬೇಡವೇ? ಮಾಂಚೆಸ್ಟರ್ ಬಟ್ಟೆಗೆ ಮರುಳಾಗಿ ನಮ್ಮ ಡಕ್ಕಾ ಮಸ್ಲಿನ್ನಿಗೇನು ಮಾಡಿದೆವು?—ಚೀನಾ ಜಪಾನು ಸಿಲ್ಕುಗಳಿಗೆ ಮನ ಸೋತು ನಮ್ಮ ರೇಷ್ಮೆ ವ್ಯವಸಾಯವನ್ನೇನು ಮಾಡಿದೆವು?—ದೇಶೀಯ ವರ್ಣರಚನಾ ವಿಧಾನಗಳನ್ನು ವಿದೇಶೀಯ ಬಣ್ಣಗಳಿಗೆ ಬದಲು ಮಾಡಿ ನಮಗೆ ಬಂದ ಲಾಭವೇನು?—ಇಂದು ನಮ್ಮ ಜೀವನದ ಯಾವ ಯಾವ ಭಾಗವಲ್ಲಿ ಎಷ್ಟೆಷ್ಟು 'ಸ್ವ'ತ್ವವು ಉಳಿದುಕೊಂಡಿದೆ. ಇಂದು ನಮ್ಮ ಭಾಷೆಯನ್ನೂ ನೀಗಿಕೊಳ್ಳಬೇಕೋ?—ನಮ್ಮ ಸಾಹಿತ್ಯದ ಸುಧಾಸರಸ್ಸನ್ನು ಬಗ್ಗಡದ ನೀರಿಗೆ ಬದಲಾಯಿಸಬೇಕೋ?—ನಮ್ಮ ನಲ್ಮೆಯ ಸೌಜನ್ಯದ ನುಡಿಗಳ ಸ್ಥಾನದಲ್ಲಿ 'ಆಯಿಯೇ - ಬೈಠಿಯೇ' ಬರಬೇಕೋ?—ಉತ್ತರದಿಂದ ಬಂದ ಗಂಗೆಯೆಂದು ನಮ್ಮ ಕಾವೇರಿಯನ್ನು ಕೈಬಿಡಬೇಕೋ?

ಇದು ಕನ್ನಡಿಗರ ವಿಷಮಕಾಲ. ಒಮ್ಮನದಿಂದ ಅವರು ಕನ್ನಡ ನಾಯಕರ ನೆರವಿಗೆ ನಿಲ್ಲಬೇಕು. ಇದು ಉಭಯ ಸಂಬಂಧ, ಉಭಯ ಪ್ರೇಮಗಳ ಕಾಲವಲ್ಲ. ಕನ್ನಡವನ್ನೇ ಪ್ರೀತಿಸದಿದ್ದ ಕನ್ನಡಿಗನು ಎಂದಿಗೂ ಭಾರತವನ್ನೂ ಅದರ ದಿವ್ಯವಾಣಿಯಾದ ರಾಷ್ಟ್ರ ಮಹಾಸಭೆಯನ್ನೂ ಪ್ರೀತಿಸಲಾರ. ಕನ್ನಡದ ಮೇಲಣ ಪ್ರೇಮವು ರಾಷ್ಟ್ರಪ್ರೇಮದ ಮುಗುಳು. ಕನ್ನಡ ದೇಶವನ್ನುಳಿದು ಭಾರತವು ಸಂಯುಕ್ತ ಭಾರತವಾಗಲಾರದು: ಭಾರತದಿಂದ ಕನ್ನಡ ದೇಶವು ಬೇರೆ ನಿಲ್ಲಲಾಗುವುದಿಲ್ಲ. ಆದರೆ ಕನ್ನಡಿಗರು ತಪ್ಪು ಕಲ್ಪನೆಗಳಿಂದ ಕನ್ನಡಕ್ಕೆ ವಿರುದ್ಧ ವರ್ತಿಸುವುದೂ, ಕನ್ನಡದ ಪ್ರಗತಿಗೆ ಅಡ್ಡಿಬರುವ ಭಾಷೆ, ಸಂಸ್ಥೆಗಳನ್ನು ರಕ್ಷಿಸಿ

ಪೋಷಿಸುವುದೂ ಆತ್ಮಘಾತುಕತನವಲ್ಲದೆ ಮತ್ತೇನು? ಈ ಮನೋವೃತ್ತಿಯೇ ಅಲ್ಲವೆ ಹಿಂದೆ ನಮ್ಮ ದೇಶವನ್ನು ಕಂಡವರಿಗೆ 'ಹಸಾದ' ಮಾಡಿಕೊಟ್ಟದು!

ವಿಶ್ವವಾಣಿ–ಡಿಸೆಂಬರ್ ೩೬

---

## ೧೦. ಪ್ರೊ. ವಾಡಿಯಾರವರ ಭಾಷಣ

ಮೈಸೂರು ವಿಶ್ವವಿದ್ಯಾನಿಲಯದ ತತ್ವಜ್ಞಾನ ಪಂಡಿತರಾದ ಪ್ರೊ. ವಾಡಿಯಾರವರು "ಹಿಂದಿಯ ಸೊಗಸಿ"ನ ಮೇಲೆ ಭಾಷಣ ಮಾಡಬೇಕೆಂದು ಡಾ|| ಸಿ. ಬಿ. ರಾಮರಾಯರು ಕೇಳಿಕೊಂಡ ಹಾಗೂ, ವಿಶ್ವವಿದ್ಯಾನಿಲಯದ ಅಧಿಕಾರಿಗಳು ಒಪ್ಪಿ ಭಾಷಣವನ್ನು ಏರ್ಪಡಿಸಿದ ಹಾಗೂ ತಿಳಿಯಬಂದಿದೆ. ಕಳೆದ ಸಂಚಿಕೆಯಲ್ಲಿ ನಾವು ವಿಶ್ವವಿದ್ಯಾನಿಲಯದ ಹಿಂದಿ ಪ್ರಸಾರ ನೀತಿಯನ್ನು ಕುರಿತು ಟೀಕಿಸಿದ್ದೆವು. ಇದು ನಮ್ಮ ಟೀಕೆಯ ಶಂಕೆಯನ್ನು ಬಲಪಡಿಸುತ್ತದೆ. ವಿಶ್ವವಿದ್ಯಾನಿಲಯದ "ಜ್ಞಾನಪ್ರಸಾರ ಭಾಷಣ"ಗಳ ಉದ್ದೇಶವು ಜ್ಞಾನಪ್ರಸಾರವೇ ವಿನಾ ಅಭಿಮತ ಪ್ರಸಾರವಲ್ಲ. ತತ್ವಜ್ಞಾನ ಪಂಡಿತರಿಗೂ ಹಿಂದಿಗೂ ವಿಶ್ವವಿದ್ಯಾನಿಲಯದಲ್ಲಿ ಯಾವ ಸಂಬಂಧವೋ ನಮಗೆ ತಿಳಿಯದು. ಪ್ರೊ. ವಾಡಿಯಾರವರ ಹಿಂದಿ ಚಳುವಳಿಗೆ ವಿಶ್ವವಿದ್ಯಾನಿಲಯವು ಸಹಕಾರ ಕೊಟ್ಟು ನಾಗರಿಕ ಪ್ರಪಂಚದ ನಗೆಗೀಡಾಗಿದೆ. ಇಂದು ಹಿಂದಿ ಪ್ರಸಾರವನ್ನು ಕೈಗೊಂಡಂತೆ ನಾಳೆ ಅರೇಬಿಕ್, ಪರ್ಶಿಯನ್, ಫ್ರೆಂಚ್, ಲ್ಯಾಟಿನ್ ಭಾಷಗಳ ಪ್ರಸಾರವನ್ನೇಕೆ ತಕ್ಕೆ ಕೈಗೊಳ್ಳಬಾರದು. ಮೈಸೂರು ವಿಶ್ವವಿದ್ಯಾನಿಲಯ ದಿನದಿನಕ್ಕೆ ಹಿಂದಿ ಪ್ರೇಮಿಗಳ ಪಾಲಾಗುತ್ತಿರುವುದು ಶೋಚನೀಯ.

**ಭಾಷಣದ ಭಾಷೆ**

ತಮ್ಮ ಭಾಷಣವನ್ನು ಪ್ರೊ. ವಾಡಿಯಾರವರು ಇಂಗ್ಲೀಷಿನಲ್ಲಿ ಮಾಡುವ ಅಗತ್ಯ ಕಂಡುಬರಲಿಲ್ಲ. ಹಿಂದಿಯ ಸೊಗಸನ್ನು ಹೇಳಹೋದ

ಪ್ರೊಫೆಸರ್ ಸಾಹೇಬರು ಇಂಗ್ಲೀಷಿನ ಸೊಗಸನ್ನು ತಮ್ಮ ಮುದ್ದಾದ ಮಾತುಗಾರಿಕೆಯಿಂದ ಸಾರಿದರು. ಕೆಲವು ತಿಂಗಳುಗಳ ಹಿಂದೆ ಬೆಂಗಳೂರಿನಲ್ಲಿ ಹಿಂದಿ ಪ್ರಚಾರ ಸಭೆಯೊಂದರ ವಾರ್ಷಿಕಾಧಿವೇಶನದಲ್ಲಿ ಅದರ ಕಾರ್ಯದರ್ಶಿಗಳು ಇಂಗ್ಲೀಷಿನಲ್ಲಿ ಭಾಷಣ ಮಾಡಿದಾಗ ಮದರಾಸಿನ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಮಂತ್ರಿಗಳಾದ ಶ್ರೀ ಸತ್ಯನಾರಾಯಣರಾಯರು "ಇದು ಹಿಂದೀ ಪ್ರಸಾರವಲ್ಲ, ಇಂಗ್ಲಿಷ್ ಪ್ರಸಾರ. ಇಂತಹ ಸಭೆಗಳಲ್ಲಿ ಭಾಷಣ ಮಾಡುವವರು ಹಿಂದಿಯಲ್ಲಿಯೇ ಮಾತನಾಡಬೇಕು; ಇಲ್ಲವಾದರೆ ದೇಶಭಾಷೆಯಾದ ಕನ್ನಡದಲ್ಲಿ ಮಾತನಾಡಬೇಕು" ಎಂದು ಘಂಟಾಘೋಷವಾಗಿ ಸಾರಿದರು. ಇದು ನಮ್ಮ ತತ್ವಜ್ಞಾನದ ಪ್ರೊಫೆಸರರವರಿಗೂ ಅನ್ವಯಿಸುತ್ತದೆ.

## ಪಂಡಿತರ ಹಿಂದೀ ಜ್ಞಾನ

ಪ್ರೊ. ವಾಡಿಯಾರವರು ಮಾಡಿದ ಭಾಷಣವನ್ನು ಹಿಂದೀ ಕಲಿಯದಿರುವ ಯಾವನಾದರೂ ಇಂಗ್ಲಿಷ್ ಪುಸ್ತಕಗಳ ಸಹಾಯದಿಂದ ಮಾಡಬಹುದಾಗಿತ್ತು. ಹಿಂದಿಯ ಸೊಗಸನ್ನು ನಿರೂಪಿಸುತ್ತ ಪಂಡಿತರು ಕಬೀರ್, ತುಲಸಿ, ಮೀರಾ ಮೊದಲಾದ ಕವಿ, ಕವಯಿತ್ರಿಯರ ಕೃತಿಗಳ ಕೆಲಭಾಗಗಳನ್ನು ಕವಿರವೀಂದ್ರರ ಭಾಷಾಂತರಗಳಿಂದಲೂ, ರೆವರೆಂಡ್ ಕೇಯವರ ಭಾಷಾಂತರಗಳಿಂದಲೂ ಓದಿದರು. ಕಬೀರ್ ನಮ್ಮ ಪಂಡಿತರ ಪ್ರೇಮದ ಕವಿ. ಅವನ ಪರಿಚಯ ಮಾಡಿಕೊಡುತ್ತಾ ಗುರು ರಮಾನಂದರನ್ನು ಸ್ನಾನಘಟ್ಟದಲ್ಲಿ ಒಲಿಸಿಕೊಂಡ ಕಥೆಯಂತಹ ಕಗ್ಗಗಳನ್ನೇ ಆಧಾರವಾಗಿಟ್ಟುಕೊಂಡರು. ಈ ಕಗ್ಗಗಳನ್ನೆಲ್ಲಾ ಪ್ರೊ. ಮೋಹನಸಿಂಗರೆಂಬ ವಿದ್ವಾಂಸರು ತಮ್ಮ 'ಕಬೀರ್' ಗ್ರಂಥದಲ್ಲಿ ಛಿದ್ರಛಿದ್ರ ಮಾಡಿದ್ದಾರೆ.

ಹಿಂದಿಯ ಕಾವ್ಯಸಾಹಿತ್ಯದ ವೈಶಿಷ್ಟ್ಯವನ್ನು ಸಾರುತ್ತಾ "ಭಾರತವರ್ಷದ ಯಾವ ಪ್ರಾಂತಿಕ ಭಾಷೆಯಲ್ಲಿಯೂ ಹಿಂದಿಯಲ್ಲಿರುವಂತಹ ರಹಸ್ಯಬೋಧಾ ಸಾಹಿತ್ಯ (Mystic Literature) ಇಲ್ಲ" ಎಂದರು. ಪಂಡಿತರು ಕನ್ನಡ ನಾಡಿನ ಬಗ್ಗೆ ಎಷ್ಟು ತಿಳಿದಿದ್ದಾರೆನ್ನುವುದಕ್ಕೆ ಈ

ಮುಕ್ತಾಫಲವೇ ಸಾಕ್ಷಿ. ಅನುಭವಮಂಟಪದ ಶರಣರು, ದಾಸಕೂಟದ ಭಕ್ತರು ಇವರು ಸೃಷ್ಟಿಮಾಡಿರುವ ರಹಸ್ಯಬೋಧಾ ಸಾಹಿತ್ಯ ಜಗತ್ತಿ ನಲ್ಲಿಯೇ ಅದ್ವಿತೀಯವಾಗಿ ನಿಂತಿದೆ. ಕನ್ನಡ ನಾಡಿನಲ್ಲಿ ರಹಸ್ಯಬೋಧಾ ವಾದಿಗಳು ಒಬ್ಬೊಬ್ಬರೇ ಕಾಣಿಸಿಕೊಳ್ಳಲಿಲ್ಲ—ಪಡೆಪಡೆಗಳಾಗಿ ಬಂದು ಹೋದರು. ತತ್ತ್ವಜ್ಞಾನ ಪಂಡಿತರು ಇನ್ನಾದರೂ ಈ ವಿಷಯವನ್ನು ಸ್ವಲ್ಪ ಅವಲೋಕಿಸುವುದು ಒಳ್ಳೆಯದು. ತಮ್ಮ ಭಾಷಣಗಳಲ್ಲಿ ಮುಂದೆ ಯಾದರೂ ಅವರು ತಪ್ಪು ಅಭಿಪ್ರಾಯಗಳನ್ನು ವ್ಯಕ್ತಗೊಳಿಸದಿರಲು ಅನು ಕೂಲವಾಗುತ್ತದೆ.

## ಹಿಂದಿ—ಹಿಂದುಸ್ಥಾನಿ—ಉರ್ದು

ಪ್ರೊ. ವಾಡಿಯಾರವರಿಗೆ ಹಿಂದಿ, ಹಿಂದುಸ್ಥಾನಿ, ಉರ್ದು ಎಲ್ಲಾ ಒಂದೇ ಭಾಷೆಯೆಂಬ ಕಲ್ಪನೆ. ಈ 'ಒಂದೇ' ಭಾಷೆಯಿಂದ ದೇಶದ ಸರ್ವತೋಮುಖ ಪ್ರಗತಿಯು ಸಾಧ್ಯವೆಂದು ಅವರ ಅಭಿಪ್ರಾಯ. ಹಿಂದೂಸ್ಥಾನಿ ಪರಿಷತ್ತಿನ ಐದನೆಯ ವಾರ್ಷಿಕ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾದ ಸರ್ ತೇಜ್‌ಬಹದ್ದೂರ್ ಸಪ್ರೂರವರು ತಾವು ಅನೇಕ ಹಿಂದಿ ಉರ್ದು ಪತ್ರಿಕೆಗಳನ್ನು ಓದಿರುವುದಾಗಿಯೂ, ಹೊಸದಾಗಿ ಸೃಷ್ಟಿ ಯಾಗುತ್ತಿರುವ ಭಾಷೆಯು ಹೀಗಿದ್ದರೆ ಮುಂದೇನು ಗತಿ ಎಂಬ ಯೋಚನೆ ತಮಗೆ ಬಂದಿರುವುದಾಗಿಯೂ, ತಿಳಿಸಿ ಇನ್ನು ೨೦ ವರ್ಷಗಳಾನಂತರದ ಹಿಂದುವೊಬ್ಬನು ಮುಸಲ್ಮಾನನೊಬ್ಬನನ್ನು ಸಂಧಿಸಿದರೆ ಇಬ್ಬರ ಭಾಷೆ ಯನ್ನೂ ಬಲ್ಲ ದ್ವಿಭಾಷೆಯನ್ನು ಇಟ್ಟುಕೊಂಡೇ ವ್ಯವಹರಿಸಬೇಕಾಗುತ್ತದೆ ಎಂದು ಹೇಳಿರುವರು. ಇದು ಉತ್ತರ ಹಿಂದೂಸ್ಥಾನದ ಪರಿಸ್ಥಿತಿ. ಹಿಂದಿಗೆ ಖಚಿತವಾದ ರೂಪವೇ ಇನ್ನೂ ಬಂದಿಲ್ಲ. ಪೂರ್ವ ಪಶ್ಚಿಮ ಭಾರತಗಳ ಹಿಂದಿ ಎರಡು ಭಾಷೆಗಳಾಗಿಯೇ ಇವೆ. ಒಂದರಲ್ಲಿ ಸಂಸ್ಕೃತ ಪ್ರಾಧಾನ್ಯ—ಲಿಪಿ ಸಂಸ್ಕೃತ; ಇನ್ನೊಂದರಲ್ಲಿ ಪರ್ಶಿಯನ್ ಅರಾಬಿಕ್ ಪ್ರಾಧಾನ್ಯ—ಲಿಪಿ ಅರಾಬಿಕ್. ತತ್ತ್ವಜ್ಞಾನ ಶಾಸ್ತ್ರದ ಪಂಡಿತರು ಹೇಳಿದ ಹಾಗೆ ಹಿಂದಿಯು ದಂಡಿನ ಭಾಷೆ. ವ್ಯಾವಹಾರಿಕ ಅನುಕೂಲ್ಯಕ್ಕಾಗಿ ಹುಟ್ಟಿದ್ದು. ಈ ಭಾಷೆಯನ್ನು ದ್ರಾವಿಡ ಬುಡಕಟ್ಟಿಗೆ ಸೇರಿದ ಕನ್ನಡ, ತಮಿಳು,

ತೆಲುಗು, ಮಲೆಯಾಳ ಭಾಷೆಗಳಿಗೆ ವಿನಿಮಯ ಮಾಡಿರೆನ್ನುವುದು ಅಂಥ ಅಭಿಮಾನವಲ್ಲದೆ ಬೇರೆಯೇನೂ ಅಲ್ಲ.

## ಭಾರತಕ್ಕೊಂದು ಭಾಷೆ

ಕೆಲವರು ಹಿಂದಿಯ ಅಸಹಾಯಕತೆಯನ್ನು ಒಪ್ಪಿಕೊಂಡು, ಭಾರತದ ಬಹುಸಂಖ್ಯಾತ ಭಾಷೆಯಾದ್ದರಿಂದ ಅದನ್ನು ಅಖಿಲ ಭಾರತದ ಬಳಕೆಯ ಭಾಷೆಯಾಗಿ ಉಪಯೋಗಿಸಬೇಕೆನ್ನುತ್ತಾರೆ. ಇದು ಪ್ರಾಂತ್ಯ ಪ್ರಾಂತ್ಯಗಳ ಜನರನ್ನು ಒಂದುಗೂಡಿಸಲು ತುಂಬಾ ಸಹಕಾರಿಯಾಗುವುದೆನ್ನುತ್ತಾರೆ. ಪ್ರಾಂತ್ಯ ಪ್ರಾಂತ್ಯಗಳಲ್ಲಿ ಸುತ್ತಿ ವ್ಯವಹರಿಸುವ ಅವಶ್ಯಕತೆ-ಅನುಕೂಲ ಭಾರತವರ್ಷದಲ್ಲಿ ಎಷ್ಟು ಜನಕ್ಕಿದೆ. ಪ್ರವಾಸಿಗಳಾದ ವಿದ್ಯಾರ್ಥಿಗಳು ಸಾಮಾನ್ಯವಾಗಿ ಇಂಗ್ಲೀಷು ಬಲ್ಲವರು. ಅದರ ಬಲದಿಂದ ಅವರು ಅಖಿಲ ಭಾರತವನ್ನು ಸುತ್ತಿ ಬರಬಹುದು. ವ್ಯಾಪಾರಿಗಳಾಗಿ ಹೋಗುವ ಜನ ಯಾರ ಒತ್ತಾಯವೂ ಇಲ್ಲದೆ ತಾವೇ ಭಾಷೆಯನ್ನು 'ಆಯ್ದು'ಕೊಳ್ಳುತ್ತಾರೆ. ಮುಂಬಯಿಯಲ್ಲಿ ನೆಲಸಿರುವ ಮೈಸೂರು, ಕಾರವಾರ, ಮಂಗಳೂರು, ಮದರಾಸು ಜನಕ್ಕೆ ಯಾರು ಹಿಂದಿ ಗುಜರಾತಿ ಪ್ರಸಾರ ಮಾಡಿದರು. ಹೈದರಾಬಾದು, ಲಕ್ನೋ, ಡೆಲ್ಲಿಗಳಲ್ಲಿ ನೆಲಸಿರುವ ಕನ್ನಡಿಗರಿಗೆ ಯಾರು ಉರ್ದು ಪ್ರಸಾರ ಮಾಡಿದರು. ಕಲ್ಕತ್ತೆಯಲ್ಲಿ ನೆಲಸಿರುವ ಸಾವಿರಾರು ಮಂದಿ ಮೈಸೂರಿನವರಿಗೆ ಯಾರು ಬಂಗಾಳಿ ಪ್ರಸಾರ ಮಾಡಿದರು. ನಮ್ಮಲ್ಲಿ ಹೋಟಲು, ಗಿರವಿ ಅಂಗಡಿ, ಸರಾಫ್ ಅಂಗಡಿ, ಬಟ್ಟೆ ಅಂಗಡಿ ಇಟ್ಟಿರುವ ಮಾರವಾಡಿ, ಮುಲ್ತಾನಿಗಳಿಗೆ ಕನ್ನಡವನ್ನು ಪ್ರಸಾರ ಮಾಡಿದವರು ಯಾರು? ಕಾಗದ, ಕಬ್ಬಿಣ, ನಾಜೂಕಿನ ಸಾಮಾನಿನ ವ್ಯಾಪಾರ ಮಾಡುವ ಲಬ್ಬೆಯವರಿಗೆ ಕನ್ನಡ ಪ್ರಸಾರ ಮಾಡಿದವರು ಯಾರು? ಅವಶ್ಯಕತೆ ಕಂಡುಬಂದಂತೆ ಜಗತ್ತು ತಾನೇ ತಾನಾಗಿ ವಿಸ್ತರಿಸಿಕೊಂಡು ಹೋಗುತ್ತದೆ. ಇದಕ್ಕೆ ಪ್ರಸಾರ ಸಂಸ್ಥೆಗಳ ಅವಶ್ಯಕವಿಲ್ಲ. ವಿಶ್ವವಿದ್ಯಾನಿಲಯದಂತಹ ಸರಸ್ವತೀ ಮಂದಿರಗಳು ಈ ಕಾರ್ಯವನ್ನು ಕೈಗೊಳ್ಳುವ ಕಾರಣವಿಲ್ಲ.

## ಸಾಧಕ ಬಾಧಕಗಳು

ಹಿಂದಿ ಪ್ರಸಾರದಿಂದ ಕನ್ನಡಿಗರಿಗೆ ನಷ್ಟವಿಲ್ಲವೆಂದು ಹಿಂದಿಯ ಪ್ರೋಷಕರೂ ಅಭಿಮಾನಿಗಳೂ ಸಾರುತ್ತಿದ್ದಾರೆ. ಇಂಗ್ಲೀಷಿನ ಮೋಹದ ಮಬ್ಬು ಈಗೀಗ ಹರಿದು ಮಾತೃಭಾಷೆಯಲ್ಲಿಯೇ ವ್ಯವಹರಿಸಬೇಕು, ಮಾತೃಭಾಷೆಯ ಗ್ರಂಥಗಳನ್ನು ಓದಬೇಕು. ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ ಮೊದಲಾದ ಸಂಸ್ಥೆಗಳಲ್ಲಿ ಕನ್ನಡದಲ್ಲಿ ಮಾತನಾಡಬೇಕು ಎನ್ನುವ ಹಂಬಲ ಹುಟ್ಟುವ ಹೊತ್ತಿಗೆ ಹಿಂದಿಯ ಹುಚ್ಚು ಹೊಳೆ ಬಂದರೆ ನಷ್ಟವಿಲ್ಲವೇನು? ನಮ್ಮಲ್ಲಿ ವಿದ್ಯಾಪ್ರಸಾರವೆಷ್ಟಾಗಿದೆ—ಅಕ್ಷರಜ್ಞರು ಎಷ್ಟು ಜನರಿದ್ದಾರೆ—ಪ್ರಾಥಮಿಕ ಶಿಕ್ಷಣ ಹೇಗೆ ಬೆಳೆಯುತ್ತಿದೆ—ಸಾರ್ವಜನಿಕ ಗ್ರಂಥಭಂಡಾರಗಳೂ ಪ್ರಚಲಿತ ಗ್ರಂಥಭಾಂಡಾರಗಳೂ ಇವೆಯೇ—ವೃತ್ತಿಶಿಕ್ಷಣದ ಗತಿಯೇನು? ಮೊದಲಾದ ನೂರಾರು ಸಮಸ್ಯೆಗಳು ಮುಂದಿರುವಾಗ ಕೆಲಸ ಮಾಡಲು ಎಷ್ಟು ಜನ ಮುಂದೆ ಬಂದರೂ ಸಾಲದಿರುವಾಗ ಹಿಂದಿ ಕಲಿಯುವ ಹುಚ್ಚಿಗೆ ನಮ್ಮ ಕಲಿತ ಜನ ಬಿದ್ದರೆ ಇದರಿಂದ ದೇಶಕ್ಕಾದ ಲಾಭವೇನು. ಅವರು ಕಲಿತದ್ದನ್ನು ಯಾವ ರೀತಿಯಲ್ಲಾದರೂ ಸಾರ್ವಜನಿಕ ಹಿತಕ್ಕಾಗಿ ವಿನಿಯೋಗ ಮಾಡುವ ಅನುಕೂಲವಿರುವುದೋ? ಜನತೆ ಹಿಂದಿ ಕಲಿಯಬೇಕು—ಆ ಮೇಲೆ ಅವರಿಗೆ ಹಿಂದೀ ಶಾಲೆಗಳು—ಆ ಮೇಲೆ ಪತ್ರಿಕೆ, ಗ್ರಂಥಗಳ ಪಠನ ಈ ಪರಿಸ್ಥಿತಿಯು ಬರುವ ವೇಳೆಗೆ ನಮ್ಮ ಸ್ಥಿತಿ ಏನಾಗುತ್ತದೆಂಬುದನ್ನು ಸ್ವಲ್ಪ ಹೋಲಿಸಿ ನೋಡಬೇಕು. ಹಿಂದಿಭಾಷೆಯನ್ನು ಕಲಿಯಲು ಆರು ತಿಂಗಳು ಸಾಕಂತೆ! (ಕಾಕಾ ಕಾಲೇಲಕರವರು ಹೇಳಿರುವ ಮಾತಿದು) ಆರು ತಿಂಗಳಲ್ಲಿ ಒಬ್ಬ ವ್ಯಕ್ತಿಗೆ ಎಷ್ಟು ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಜ್ಞಾನ ಬರಬಹುದು. ಭಾಷೆಯನ್ನು ಸಾಧಿಸಿಕೊಳ್ಳುವ ಭರದಲ್ಲಿ ವಿದ್ಯಾರ್ಥಿ ಸಾಹಿತ್ಯ ಪಠನಕ್ಕೆ ವೇಳೆ ವಿರಾಮವನ್ನೆಲ್ಲಿಂದ ತರುತ್ತಾನೆ. ತನಗೆ ಬಂದಿರುವ-ತನ್ನ ರಕ್ತದೊಂದಿಗೆ ಕೂಡಿ ಬೆಳೆದು ಬಂದಿರುವ ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸುವ ಅನುಕೂಲವನ್ನು ಹಿಂದಿಯ ಮೋಹಕ್ಕೆ ತ್ಯಜಿಸುತ್ತಾನೆ. ಕನ್ನಡ ಕಾವ್ಯದ ಪೆಂಡೆ ಖರ್ಜೂರಕ್ಕಿಂತಲೂ ಹಿಂದಿಯ

ಹುಣಿಸೇಹಣ್ಣು ಉತ್ತಮವೆಂದು ಭಾವಿಸುತ್ತಾನೆ. ಇದು ಕೇವಲ ನವೀನತೆಗೆ ಕೊಡುವ ರಕ್ತಕಾಣಿಕೆ.

ಭಾಷೆ, ಸಾಹಿತ್ಯಗಳ ತೊಂದರೆ ಮಾತ್ರವೇ ಅಲ್ಲ. ನಮ್ಮ ಸಂಸ್ಕೃತಿಯ ಗತಿಯನ್ನೂ ಗಮನಿಸಬೇಕು. ಮೊಘಲರ ಕಾಲದ ಇತಿಹಾಸವು ನಮ್ಮ ಕಣ್ಣುಮುಂದೆ ಈ ವಿಕಾರ ಚಿತ್ರದ ವಿಶ್ವರೂಪವನ್ನು ಹೊತ್ತು ನಿಂತಿದೆ. ಭಾರತ ವರ್ಷದ ಸಂಗೀತ ಇಂಡೋ-ಪರ್ಶಿಯನ್ ಆಗಿಹೋಯಿತು. ಹಿಂದೂ ಮುಸಲ್ಮಾನ ಸಂಗೀತಗಾರರೆಲ್ಲರ ಬಾಯಿಯಲ್ಲಿಯೂ ಸಾದಿ, ಹಫೀಜ್, ರೂಮಿ, ಮನಸೂರ್ ಇವರ ಘಜಲುಗಳು ಕವಾಲಿಗಳು. ಭಾರತವರ್ಷದ ಚಿತ್ರಕಲೆಯು ಕಾಂಗ್ರಾ ಕಣಿವೆಯನ್ನು ಸೇರಿ ಐವತ್ತು ವರ್ಷ ಕುಂಟು ಜೀವ ಧರಿಸಿ ಅವಸಾನಹೊಂದಿತು. ಜನತೆಯ ಉಡುಗೆತೊಡುಗೆ, ಮಾತುಕತೆ, ಆಹಾರವಿಹಾರ ಎಲ್ಲದರಲ್ಲಿಯೂ ಮೊಘಲರ ಮುದ್ರೆ ಎತ್ತಿ ಕಾಣುತ್ತಿದೆ. ಧಾರ್ಮಿಕ ರಾಜಕೀಯ ದಾಸ್ಯವನ್ನು ಛತ್ರಪತಿ ಶಿವಾಜಿ ಎದುರಿಸಿ ಜಯಶಾಲಿಯಾಗಲು ಸಾಧ್ಯನಾದರೂ ಸಾಂಸ್ಕೃತಿಕ ದಾಸ್ಯವನ್ನು ಅವನು ಎದುರಿಸಲಾಗಲಿಲ್ಲ. ಅವನ ವೇಳೆಗೆ ಭಾರತೀಯ ಕಲಾವಿದರು ಕೊನೆಗಂಡಿದ್ದರು. ಉಳಿದಿದ್ದವರು ಇಂಡೋ-ಪರ್ಶಿಯನ್ ಸಂಪ್ರದಾಯದ ದತ್ತುಪುತ್ರರು.

ಇಂದಿನ ಕರ್ಣಾಟಕದಲ್ಲಿ ಹೆಮ್ಮೆಪಡುವಂತಹ ಸಂಗೀತ ಸಂಪ್ರದಾಯವಿದೆ, ಚಿತ್ರಕಲೆಯಿದೆ, ಶಿಲ್ಪವಿದೆ, ಪ್ರತಿಮಾಶಾಸ್ತ್ರವಿದೆ. ಇವೆಲ್ಲ ಜೀವಂತ ಕಲೆಗಳು. ಕರ್ಣಾಟಕ ಸಂಪ್ರದಾಯವನ್ನನುಸರಿಸುವ ನೂರಾರು ಕಲಾವಿದರು ಜೀವಂತರಾಗಿದ್ದಾರೆ. ಕರ್ಣಾಟಕದ ನಾಟಕಕಲೆಯು ಭಾರತದಲ್ಲೆಲ್ಲಾ ತನ್ನ ಹೆಚ್ಚಳವನ್ನು ಸಾರಿದೆ. ನೋಬೆಲ್ ಪಾರಿತೋಷಕಕ್ಕೆ ಅರ್ಹರಾದ ಕವಿಗಳೂ, ಕತೆಗಾರರೂ, ನಾಟಕಕರ್ತರೂ, ಕಾದಂಬರಿಕಾರರೂ ಸಾಹಿತ್ಯ ವೃಕ್ಷಕ್ಕೆ ತಮ್ಮ ಹೃದಯ ರಕ್ತವನ್ನು ಬಸಿದು ಬೆಳೆಸುತ್ತಿದ್ದಾರೆ. ಕನ್ನಡ ಬರದಿದ್ದವನು ಕೂಡ ತಲೆದೂಗುವಂತೆ ಮಾತಾಡಬಲ್ಲ ವಾಗ್ಮಿಗಳಿದ್ದಾರೆ. ಎಲ್ಲಕ್ಕೂ ಹೆಚ್ಚಾಗಿ ಆಸರೆಯಾಗಿ ವಿಖ್ಯಾತ ಇತಿಹಾಸವಿದೆ. ಆ ಇತಿಹಾಸವು ಓತಪ್ರೋತವಾಗಿ ಬೆಳೆಯುತ್ತಿದೆ. ಇವೆಲ್ಲಕ್ಕೂ ಹಿಂದಿಯು ತಿಲೋದಕ ಬಿಡಬೇಕೇ? ಕನ್ನಡವು ತನ್ನ ವೈಶಿಷ್ಟ್ಯವನ್ನು

ಕಂಡುಕೊಂಡ ೧೦, ೧೨ ವರ್ಷಗಳಲ್ಲಿ ಮಹತ್ತರವಾದ ಈ ಸುಧಾರಣೆಗಳಾಗಿವೆ. ಕನ್ನಡವು ಜನತೆಯಲ್ಲಿ ಹಬ್ಬಿದಷ್ಟೂ ಅದರ ಸುಪ್ತ ಸೌಂದರ್ಯದ ಹೊಸ ಹೊಸ ಕಳೆಗಳು ಕಣ್ಣಿಗೆ ಗೋಚರವಾಗುತ್ತಿವೆ. ಬ್ರಾಹ್ಮಣರು, ಜೈನರು, ವೀರಶೈವರು, ಮುಸಲ್ಮಾನರು, ಕ್ರೈಸ್ತರು ಕನ್ನಡದ ಸೇವೆಗೆ ಒಮ್ಮನದಿಂದ ನುಗ್ಗುತ್ತಿದ್ದಾರೆ. ಕನ್ನಡವನ್ನು ಉದ್ಧಾರಮಾಡುತ್ತಿದ್ದೇವೆಂಬ ಮನೋಗುಣ ಕನ್ನಡದಿಂದ ಉದ್ಧಾರವಾಗುತ್ತಿದ್ದೇವೆಂಬ ಭಾವನೆಗೆ ಎಡೆಗೊಟ್ಟಿದೆ. ಈ ಜಾಗೃತಿಯು ಮಾತೃಭಾಷೆಯಿಂದಲ್ಲದೆ ಬೇರೆ ಯಾವದರಿಂದಲೂ ಸಾಧ್ಯವಿಲ್ಲ. ಹಿಂದಿಯೇ ಮೊದಲಾದ ಭಾಷೆಗಳು ನಮ್ಮ ಪ್ರಗತಿಯನ್ನು ತಡೆಗಟ್ಟಬಹುದಲ್ಲದೆ ಪರಿಪೋಷಿಸಿ ಬೆಳೆಸಲು ಎಂದಿಗೂ ಸಾಧ್ಯವಿಲ್ಲ.

ವಿಶ್ವವಾಣಿ-ಜನವರಿ ೧೯೩೭.

---

## ೧೧. ಮತ್ತೆ ಹಿಂದೀ

ಮೈಸೂರಿನಲ್ಲಿ ಹಿಂದೀ ಪ್ರಚಾರವನ್ನು ಬಲಗೊಳಿಸುವುದಕ್ಕೆ ಆಚಾರ್ಯ ಕಾಕಾ ಕಾಲೇಲಕರವರು, ಶ್ರೀ ರಂಗನಾಥ ದಿವಾಕರರೊಂದಿಗೆ ಪ್ರವಾಸವನ್ನು ಕೈಗೊಂಡು ದಿವಾನರಲ್ಲಿ ನಿಯೋಗ ಹೋಗಿದ್ದುದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹಿಂದೀ ಮಂದಿರವನ್ನು ಸ್ಥಾಪಿಸಲು ಸ್ಥಳ, ಮಂದಿರವನ್ನು ಕಟ್ಟಲು ಮತ್ತು ಪೋಷಿಸಲು ಹಣವನ್ನು ನಿಯೋಗ ಗೋಷ್ಠಿಯವರು ಕೇಳಿದುದಾಗಿ ತಿಳಿಯಬರುತ್ತದೆ. ದಿವಾನ ಸಾಹೇಬರವರು ಖಂಡಿತವಾದ ಉತ್ತರವನ್ನು ಹೇಳದೆ ಸಂಬಂಧಪಟ್ಟ ಅಧಿಕಾರಿಗಳ ಸಲಹೆ ಕೇಳಿ ಉತ್ತರ ಕೊಡುವುದಾಗಿ ತಿಳಿಸಿದರೆಂದು ಪ್ರಕಟವಾಗಿದೆ.

ಆಚಾರ್ಯ ಕಾಲೇಲಕರವರೂ, ಶ್ರೀ ದಿವಾಕರರೂ ಹಿಂದೀಯಿಂದ ಕನ್ನಡಕ್ಕೆ ತೊಂದರೆಯಾಗುವುದಿಲ್ಲ ಎಂದು ಎಷ್ಟು ಸಾರಿದರೂ ನಾವು ಒಪ್ಪುವ ಹಾಗಿಲ್ಲ. ಕನ್ನಡಕ್ಕೆ ತೊಂದರೆಯಾಗಿದೆ—ತೊಂದರೆಯಾಗುತ್ತಿವೆ. ಕನ್ನಡ ಮೂಲೆಗುಂಪಾಗುತ್ತಿದೆ. ಹಿಂದೀಗೆ ಆಶ್ರಯ ಕೊಡುವು

ದೆಂದರೆ ಕನ್ನಡಿಗರು ಆತ್ಮಹತ್ಯ ಮಾಡಿಕೊಂಡಂತೆ! ಮೈಸೂರು ಸರ್ಕಾರದವರು ಹಿಂದೀಗೆ ಯಾವ ರೀತಿಯಾದ ಸಹಕಾರವನ್ನೂ ನೀಡಕೂಡದೆಂದು ನಾವು ಸವಿನಯದಿಂದ ಪ್ರಾರ್ಥಿಸುತ್ತೇವೆ. ದೈನ್ಯದಿಂದ ದಾಕ್ಷಿಣಾತ್ಯರ ಮನೆಯ ಬಾಗಿಲಿಗೆ ಬಂದ ಹಿಂದೀ ಇಂದು ಮದರಾಸಿನಲ್ಲಿ ೧೫೧ ಎ-೧ಳಳ ಶಸ್ತ್ರಾಸ್ತ್ರಗಳ ಬಲದಲ್ಲಿ ಬೆಳೆಯುತ್ತಿದೆ. ಇಂದು ನಮ್ಮ ತೆಲುಗು-ತಮಿಳು ಬಾಂಧವರು ಅನುಭವಿಸುತ್ತಿರುವ ಕಷ್ಟವನ್ನು ಕನ್ನಡಿಗರು ಅನುಭವಿಸಲು ಬಯಸುವುದಿಲ್ಲ. ಕನ್ನಡಿಗರು ಹಿಂದಿಯ ಧಾಳಿಯನ್ನು ಪ್ರತಿಭಟಿಸಬೇಕು. ಹಿಂದೀಯ ಹೆಸರಿನಲ್ಲಿ ಕನ್ನಡದ ಹಿರಿಮೆಯನ್ನು ತೆಗಳುವ ಪ್ರಚಾರಕರ ಅಪ-ಪ್ರಚಾರವನ್ನು ಖಂಡಿಸಬೇಕು.

ಉತ್ತರದ ಮಹಾಪುರುಷರ ಈ ದಂಡಯಾತ್ರೆಗೆ ನಮ್ಮ ಶ್ರೀ ದಿವಾಕರರಂತಹ ಸಾಧು ಸತ್ಪುರುಷರು ನೆರವಾಗುತ್ತಿರುವುದು ನಮಗೆ ಬಹಳ ವಿಷಾದವೆನಿಸುತ್ತದೆ. ಇದೇ ವರ್ಷ ಬಳ್ಳಾರಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಪಟ್ಟ ಕಟ್ಟಿಸಿಕೊಂಡ ಶ್ರೀ ದಿವಾಕರರು ತಮ್ಮ ಕರ್ತವ್ಯವನ್ನು ಮರೆತುದು ಶೋಚನೀಯ. ಶ್ರೀಯುತರು ಕನ್ನಡ ಪ್ರಚಾರಕ್ಕೆ ಹೊರಡಬೇಕಾಗಿತ್ತು. ಕನ್ನಡ ನಾಡಿನ ತುತ್ತಾದ ಏಕೀಕರಣಕ್ಕೆ ಕುತ್ತು ಒದಗಿರುವಾಗ ಶ್ರೀ ದಿವಾಕರರು ಹಿಂದೀ ಪ್ರಚಾರಕ್ಕೆ ಹೊರಟಿದ್ದಾರೆ. ಸ್ವಂತ ಮನೆ ಹತ್ತಿ ಉರಿಯುತ್ತಿರುವಾಗ ಪಕ್ಕದ ಮನೆಯಲ್ಲಿ ತೋಟ ಮಾಡುವುದಕ್ಕೆ ಹೋದ ಹಾಗೆ.

ಇನ್ನುಮುಂದಾದರೂ ತಮ್ಮ ಸಾಹಿತ್ಯ ಸಮ್ಮೇಳನಗಳಿಗೆ ಅಧ್ಯಕ್ಷರನ್ನು ಚುನಾಯಿಸುವಾಗ ಕನ್ನಡಿಗರು ಎಚ್ಚರರಾಗಿರಬೇಕೆಂದರೆ ತಪ್ಪಾಗಲಾರದು. ಸಾಹಿತ್ಯ ಸಮ್ಮೇಳನ ಕಾಲದಲ್ಲಿ ಮೂರು ದಿವಸ ಅಧ್ಯಕ್ಷಪೀಠವನ್ನಲಂಕರಿಸಿದರೆ ಸಾಲದು. ಕ. ಸಾ. ಸ. ಅಧ್ಯಕ್ಷರು ತಮ್ಮ ಅಧ್ಯಕ್ಷತೆಯ ಅವಧಿಯಿರುವಷ್ಟು ದಿವಸವಾದರೂ ಕಾಂಗ್ರೆಸ್ ಅಧ್ಯಕ್ಷರಂತೆ ಪ್ರವಾಸ, ಪ್ರಸಾರ ಕಾರ್ಯಗಳನ್ನು ಕೈಗೊಂಡು ಕನ್ನಡಕ್ಕಾಗಿ ದುಡಿಯಬೇಕು.

ಕನ್ನಡ ನುಡಿ ೧೪-೭-೩೮

———

# ೧೨. ದಕ್ಷಿಣ ಹಿಂದೂಸ್ಥಾನಕ್ಕೆ ಒಂದೇ ಲಿಪಿ

ಭಾರತದ ವಿವಿಧ ಭಾಷೆಗಳ ಸ್ವರೂಪವನ್ನು ಸ್ವಲ್ಪಮಟ್ಟಿಗಾದರೂ ಒಂದುಗೂಡಿಸುವುದರ ಸಲುವಾಗಿ ಏಕಲಿಪಿಯ ಆವಶ್ಯಕತೆಯು ಅನೇಕರಿಗೆ ಕಂಡುಬಂದಿದೆ. ಭಾಷೆಗಳು ಬೇರೆಬೇರೆಯಾದರೂ ಅನೇಕ ಸಲ ಅರ್ಥ ವಾಗುತ್ತದೆ. ಆದರೆ ಲಿಪಿಯು ಅಡ್ಡಬರುತ್ತದೆ. ಈ ಅಡಚಣೆಯನ್ನು ಹೋಗಲಾಡಿಸುವುದಕ್ಕೆ ತುರ್ಕಿಯಲ್ಲಿ ಆಚರಣೆಯಲ್ಲಿರುವಂತೆ ರೋಮನ್ ಲಿಪಿಯನ್ನೇ ಪ್ರಚಾರಕ್ಕೆ ತರಬೇಕೆಂದು ಪಂಡಿತ ಜವಾಹಿರಲಾಲ ನೆಹರೂ ಅವರು ಒಮ್ಮೆ ಸೂಚಿಸಿದ್ದರು. ಲಿಪಿ ಕೇವಲ ಭಾಷಾವಾಹಕವಲ್ಲ. ಅದು ನಾಡಿನ ವಾಣಿಯಾದ ಭಾಷೆಯಲ್ಲಿ ಅಡಕವಾದ ಸಂಸ್ಕೃತಿಯ ಸಂಕೇತ ವಾಗಿದೆ. ಭಾಷೆಯ ಜತೆಗೆ ಲಿಪಿಯೂ ಬೆಳೆಯುತ್ತ ಹೋಗುತ್ತದೆ. ಭಾಷೆ ಜನತೆಯ ಸಂಸ್ಕೃತಿಯನ್ನು ಅವಲಂಬಿಸಿ ಬೆಳೆಯುತ್ತದೆ. ಆದ್ದರಿಂದ ಒಮ್ಮೆಲೇ ರೋಮನ್ ಲಿಪಿಯನ್ನು ವಿನಿಮಯ ಮಾಡಿಕೊಳ್ಳುವುದಕ್ಕೆ ಮುಂಚೆ ಈ ಸಾಂಸ್ಕೃತಿಕ ಪ್ರಶ್ನೆಯನ್ನು ಗಮನಕ್ಕೆ ತಂದುಕೊಳ್ಳಬೇಕಾಗು ತ್ತದೆ. ದೇವನಾಗರಿ ಲಿಪಿ ಉತ್ತರದಲ್ಲಿ ಪ್ರಚಾರದಲ್ಲಿದೆ. ಭಾರತದ ಬಹು ಸಂಖ್ಯಾತ ಜನ ಇದನ್ನು ಬಳಸುತ್ತಿದ್ದಾರೆ. ಆದ್ದರಿಂದ ದೇವನಾಗರಿಯನ್ನೇ ದಕ್ಷಿಣ ಹಿಂದೂಸ್ಥಾನದ ಭಾಷೆಗಳಿಗೂ ಉಪಯೋಗಿಸಬೇಕೆಂದು ಹೇಳುವ ವಾದವೂ ಒಂದಿದೆ. ಉತ್ತರ ಹಿಂದೂಸ್ಥಾನದ ಭಾಷೆ, ಪ್ರಾಂತ್ಯಗಳಿಗೆ ಒಂದು ಸಂಸ್ಕೃತಿಯ ಮೈತ್ರಿ ಹೇಗಿದೆಯೋ ಹಾಗೆ ದಕ್ಷಿಣ ಹಿಂದೂಸ್ಥಾನದ ಭಾಷೆ ಸಂಸ್ಕೃತಿಗಳಿಗೂ ಮೈತ್ರಿಯಿದೆ. ಉತ್ತರ ದಕ್ಷಿಣಗಳು ಕೆಲವು ವಿಚಾರಗಳಲ್ಲಿ ಬೆರೆತಿವೆ, ಬೆರೆಯುತ್ತವೆ. ಕೆಲವು ವಿಚಾರಗಳಲ್ಲಿ ಬೆರೆಯು ಲಿಲ್ಲ, ಬೆರೆಯಲಾಗುವುದಿಲ್ಲ. ಉತ್ತರ ಹಿಂದೂಸ್ಥಾನದ ಭಾಷೆ ಸಂಸ್ಕೃತಿ ಗಳ ಮೇಲೆ ಇಸ್ಲಾಮಿ ಸಂಸ್ಕೃತಿಯ ವರ್ಚಸ್ಸು ಮೂಡಿರುವಂತೆ ದಕ್ಷಿಣ ಹಿಂದೂಸ್ಥಾನದ ಭಾಷೆ ಸಂಸ್ಕೃತಿಗಳ ಮೇಲೆ ಮೂಡಿಲ್ಲ. ಇಂದಿಗೂ ದಕ್ಷಿಣವು 'ವೇದಾರಣ್ಯ'ವಾಗಿದೆ; 'ವಿದ್ಯಾರಣ್ಯ'ವಾಗಿದೆ. ಹಿಂದೂ ಸಂಸ್ಕೃತಿಯ ಕೇಂದ್ರಸ್ಥಾನವಾಗಿದೆ. ಹಂಪೆ, ಹಳೇಬೀಡು, ಕಂಚಿ, ರಾಮೇಶ್ವರ, ಕಲ್ಯಾಣ ಹಿಂದೂ ಸಂಸ್ಕೃತಿಯ ಕಾಂತಿ ಕಿರಣಗಳಂತೆ

ಇಂದಿಗೂ ಮೆರೆಯುತ್ತಿವೆ. ಉತ್ತರದವರಿಗೆ ಗಂಗೆ, ಯಮುನೆಗಳೆಷ್ಟು ಪೂಜ್ಯವೋ ದಕ್ಷಿಣದವರಿಗೆ ಗೋದಾವರಿ, ತುಂಗಭದ್ರಾ, ಕಾವೇರಿಗಳಷ್ಟು ಪೂಜ್ಯ–ಪವಿತ್ರ. ಭಾಷೆ ಇವೆಲ್ಲದರ ದ್ಯೋತಕವೂ ಸಂಕೇತವೂ ಆಗಿ ದಕ್ಷಿಣ ಹಿಂದೂಸ್ಥಾನದ ವಿಶಿಷ್ಟ ಸಂಸ್ಕೃತಿಯ ಸಂಕೇತವಾಗಿ ಮೆರೆಯುತ್ತಿದೆ.

ಉತ್ತರದವರು ಹಿಂದಿಲಿಪಿ (ದೇವನಾಗರಿ) ಯನ್ನು ಸಾರ್ವತ್ರಿಕವಾಗಿ ಬಳಸಬಹುದು. ಮರಾಠಿ, ಗುಜರಾತಿ ಲಿಪಿಗಳಲ್ಲಿರುವ ಸಣ್ಣ ಪುಟ್ಟ ವೈವಿಧ್ಯಗಳನ್ನು ಹೊಡೆದು ಹಾಕಿ ದೇವನಾಗರಿ ಲಿಪಿಯನ್ನೇ ಸರ್ವಮಾನ್ಯ ಲಿಪಿಯನ್ನಾಗಿ ಅಂಗೀಕಾರ ಮಾಡಬಹುದು. ದಕ್ಷಿಣ ಹಿಂದೂಸ್ಥಾನವು ಏನು ಮಾಡಬೇಕೆಂಬುದರ ಬಗ್ಗೆ ಆಚಾರ್ಯ ಕಾಲೇಲಕರ್ ಅವರು ಒಂದು ಲೇಖನ ಬರೆದು—

"ಕನ್ನಡ ಹಾಗು ತೆಲುಗು ಈ ಎರಡು ಭಾಷೆಗಳು ಪರಸ್ಪರ ನಿಕಟ ಸಂಬಂಧವುಳ್ಳವಿವೆ. ಎರಡರ ಲಿಪಿಗಳಲ್ಲಿಯೂ ವಿಪುಲ ಸಾಮ್ಯವಿದೆ— ಕನ್ನಡ ಮತ್ತು ತೆಲುಗು ಲಿಪಿಗಳಲ್ಲಿ ಕನ್ನಡ ಲಿಪಿ ಹೆಚ್ಚು ಸುಂದರವಾಗಿ ಕಾಣುತ್ತದೆ. ತೆಲುಗಿನಲ್ಲಿ ಸ್ವೀಕರಿಸಲರ್ಹವಾದಂತೆ ಕೆಲವು ಸುಧಾರಣೆ ಗಳಿದ್ದರೆ, ಅವುಗಳನ್ನು ಸ್ವೀಕರಿಸಿ ಕನ್ನಡ ಮತ್ತು ತೆಲುಗು ಈ ಎರಡು ಭಾಷೆಗಳಿಗಾಗಿ ಕನ್ನಡ ಲಿಪಿಯನ್ನೇ ಪ್ರಚಲಿತ ಮಾಡುವುದನ್ನು ಈ ಎರಡು ಭಾಷೆಗಳೂ ನಿಶ್ಚಯಿಸಿದರೆ ಒಳ್ಳೆಯದು.

ವರ್ಣಮಾಲೆಯ ವಿಷಯದಲ್ಲಿ ಕೇರಳದ ಮಲೆಯಾಳಿ ಭಾಷೆ ಸಹಿತ ಕನ್ನಡ ಯಾ ತೆಲುಗುವಿನಂತೆಯೇ ಇದೆ. ಈ ಮೂರು ಭಾಷೆಗಳಿಗೆ ಒಂದೇ ಲಿಪಿಯನ್ನು ಉಪಯೋಗಿಸುವುದು ಕಠಿನವಾಗಲಾರದು.

....ಬೇರೆಯವರಿಗೆ ಅಪೂರ್ಣವೆಂದೆನಿಸುವ ತಮಿಳು ಲಿಪಿಯು ತಮಿಳು ಭಾಷೆಯ ಮಟ್ಟಿಗೆ ಪರಿಪೂರ್ಣವಿದೆಯೆಂದು ಶ್ರೀ ರಾಜಾಜಿಯವರು ಸಿದ್ಧ ಮಾಡಿದರೂ ಪ್ರತ್ಯೇಕ ಭಿನ್ನ ಉಚ್ಚಾರಕ್ಕೆ ಬೇರೆ ಬೇರೆ ಅಕ್ಷರವಿರುವುದು ಯಾವ ಕಾಲಕ್ಕೂ ಒಳ್ಳೆತೇ ಆಗುವುದು. ಅಂದಮೇಲೆ ಕನ್ನಡ ಲಿಪಿಯನ್ನು ಗ್ರಂಥಾಕ್ಷರವೆಂದು ಮನ್ನಿಸಿ ತಮಿಳ ಜನರು ಕೂಡ ತಮ್ಮ ಭಾಷೆಗೆ ಕನ್ನಡ ಲಿಪಿಯನ್ನು ಉಪಯೋಗಿಸಿದರೆಂದರೆ ಇಡೀ ದಕ್ಷಿಣ ಹಿಂದೂಸ್ಥಾನಕ್ಕಾದರೂ ಒಂದೇ ಲಿಪಿಯಾದಂತಾಗುವುದು."

ಎಂದು ಸೂಚಿಸಿದ್ದಾರೆ. ಈ ಸೂಚನೆಯು ನಮಗೆ ಮಾನ್ಯವಿದೆ. ತೆಲುಗು, ತಮಿಳು, ಮಲೆಯಾಳ ಬಂಧುಗಳು ಆಚಾರ್ಯರ ಸೂಚನೆಗೆ ಯೋಗ್ಯ ಮನ್ನಣೆಯನಿತ್ತು ಕನ್ನಡ ಲಿಪಿಯನ್ನು ಅವಲಂಬಿಸಬೇಕೆಂದು ನಾವು ಸೂಚಿಸಲಿಚ್ಛಿಸುತ್ತೇವೆ. ತನ್ನ ಆತ್ಮರಕ್ಷಣೆಗಾಗಿಯಾದರೂ ದಕ್ಷಿಣ ಹಿಂದೂಸ್ಥಾನವು ಒಂದಾಗಬೇಕು. ಏಕಲಿಪಿಯೇ ಅದಕ್ಕೆ ಮೊದಲನೆಯ ಸಾಧನೆಯಾಗಲಿ.

ಕನ್ನಡ ನುಡಿ. ೨೪-೨-೪೯

---

## ೧೩. ಕನ್ನಡ—ಸಂಸ್ಕೃತ

ಮೈಸೂರು ಸರ್ಕಾರಿ ಟ್ರೈನಿಂಗ್ ಕಾಲೇಜಿನ 'ಕರ್ನಾಟಕ ಸಂಘ'ದ ವಾರ್ಷಿಕೋತ್ಸವದ ಅಧ್ಯಕ್ಷಸ್ಥಾನದಿಂದ ಶ್ರೀ ಎಸ್. ಜಿ. ಶಾಸ್ತ್ರಿಗಳವರು ಹೀಗೆ ಹೇಳಿದ್ದಾರೆ—

"ಕನ್ನಡಕ್ಕೆ ಸಹಜವಾದ ಪ್ರಾಮುಖ್ಯತೆಯನ್ನು ಕೊಡಿಸಬೇಕೆಂಬ ಉತ್ಸಾಹದಲ್ಲಿ ಕೆಲವರು ಸಂಸ್ಕೃತವನ್ನು ಹೀಯಾಳಿಸುವರೆಂಬ ಶಂಕೆ ಕೆಲವರಲ್ಲಿ ಹುಟ್ಟಿದೆ. ಆದರೆ ಕನ್ನಡ ಭಾಷೆಯು ಬೆಳವಣಿಗೆಯಾಗಬೇಕಾದರೆ ಸಂಸ್ಕೃತದ ಸಹಾಯವಿಲ್ಲದೆ ಸಾಧ್ಯವಿಲ್ಲವೆಂಬುದನ್ನು ಎಲ್ಲರೂ ಅರಿಯಬೇಕು. ಹಾಗೆ ಹೇಳುವುದೆಂದರೆ ಕನ್ನಡದ ಮೇಲೆ ಅಭಿಮಾನವಿಲ್ಲವೆಂದಲ್ಲ. ಈಗಿನ ಕಾಲದಲ್ಲಿ ಬರೀ ಹಳಗನ್ನಡವನ್ನಿಟ್ಟುಕೊಂಡು ಕೆಲಸ ಮಾಡಲು ಸಾಧ್ಯವಿಲ್ಲ. ಸಂಸ್ಕೃತದಂತಹ ಮೂಲಭಾಷೆಯ ಸಹಾಯ ಬೇಕೇ ಬೇಕು. ಸಂಸ್ಕೃತಕ್ಕೆ ಎರಡನೇ ಸ್ಥಾನ ತೋರಿಸಿ ಅದನ್ನು ತೊರೆಯಬಾರದು. ಹಾಗೆ ಮಾಡುವುದರಿಂದ ಸಂಸ್ಕೃತಕ್ಕೂ ಗೌರವ ಬರುವುದಿಲ್ಲ. ಸಂಸ್ಕೃತಕ್ಕೆ ಚ್ಯುತಿ ಬರದಂತೆ ನೋಡಿಕೊಳ್ಳಬೇಕು. ಇತರ ಭಾಷೆಗಳಿಂದ ಬೇಕಾದುದನ್ನು ಸೇರಿಸಿಕೊಂಡು ಕನ್ನಡ ಭಾಷೆಯನ್ನು ಹೆಚ್ಚಿಸಲು ಪ್ರಯತ್ನ ಮಾಡಬೇಕು. ಇಂಗ್ಲಿಷ್ ಭಾಷೆಯಲ್ಲಿ ಕೂಡ ಬರೀ ಆಂಗ್ಲೋಸ್ಯಾಕ್ಸನ್ ಪದಗಳನ್ನೇ ಹುಡುಕಿದರೆ ಸುಮಾರು ೫೦೦-೬೦೦ಕ್ಕಿಂತ

ಹೆಚ್ಚಾಗಿ ಸಿಗುವುದಿಲ್ಲ. ಆದರೆ ಅದನ್ನು ಇಂದು ಜೀವಕಳೆಯಿಂದ ತುಂಬಿದ ಭಾಷೆಯನ್ನಾಗಿ ಪುಷ್ಟೀಕರಿಸಿ ಬೆಳೆಯಿಸಲು ಇತರ ಪ್ರಮುಖ ಭಾಷೆಗಳಿಂದ ಬೇಕಾದಷ್ಟನ್ನು ತೆಗೆದುಕೊಂಡಿದ್ದಾರೆ. ಇತರರ ಸಹಾಯ ತೆಗೆದುಕೊಂಡು ಸರಸ್ವತಿ ಭಂಡಾರ ಲೂಟಿ ಮಾಡಿದರೆ ತಪ್ಪೇ? ನಮ್ಮ ಭಾಷೆಯೇ ಹೆಚ್ಚು, ಇತರರದು ಕಡಿಮೆ ಎಂದು ಹೇಳುವುದು ಸರಿಯಲ್ಲ. ಇತರರಿಂದಲೂ ತಕ್ಕ ಸಹಾಯ ತೆಗೆದುಕೊಂಡು ಸೇರಿಸಿದರೆ ಭಾಷೆಯು ಇನ್ನೂ ಹೆಚ್ಚಾಗಿ ಬೆಳೆಯುತ್ತದೆ. ಒಂದು ದೊಡ್ಡ ನದಿಯ ಮೂಲವು ಸಣ್ಣದಾಗಿಯೇ ಇರುತ್ತದೆ. ಕ್ರಮೇಣ ಉಪನದಿಗಳು ಸೇರಿ ಅದು ದೊಡ್ಡದಾಗಿ ಹರಿಯು ವಂತೆ ಒಂದು ಭಾಷೆಗೆ ಇತರ ಭಾಷೆಗಳಿಂದಲೂ ಅನೇಕ ಪದಗಳನ್ನು ಸೇರಿಸಿ ಬೆಳೆಯಿಸಿದರೆ ಅದು ದೊಡ್ಡದಾಗಿ ತಕ್ಕ ಪ್ರಯೋಜನ ಕೊಡುತ್ತದೆ."

ಕರ್ನಾಟಕ ಸಂಘಗಳು ಮತ್ತು ಕನ್ನಡ ಪ್ರೇಮಿಗಳನೇಕರು ಸಂಸ್ಕೃತದ ಮೇಲೆ ದ್ವೇಷವನ್ನು ಸಾಧಿಸುತ್ತಿದ್ದಾರೆ; ಸಂಸ್ಕೃತದ ಸಹಾಯ ವಿಲ್ಲದಿದ್ದರೆ ಕನ್ನಡ ಬೆಳೆಯುವುದಿಲ್ಲ; ಸಂಸ್ಕೃತದ ಗೌರವವನ್ನು ಕಾಪಾಡು ವುದು ಎಲ್ಲರ ಕರ್ತವ್ಯ—ಇದೇ ಭಾಷಣದ ಮೂಲತತ್ವಗಳೆನ್ನಬಹುದು.

ಕರ್ನಾಟಕ ಸಂಘಗಳು ಸಂಸ್ಕೃತ ವಿದ್ವೇಷವನ್ನು ಬೆಳೆಸುತ್ತಿವೆ ಯೆಂದು ಶ್ರೀ ಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ. ಕನ್ನಡದ ಸರ್ವತೋ ಮುಖ ಬೆಳವಣಿಗೆಗೆ ಮನಸ್ಸು ಕೊಟ್ಟಿರುವ ಕರ್ನಾಟಕ ಸಂಘಗಳು ಈ ಉದ್ಯಮದಲ್ಲಿ ಪ್ರವೇಶಿಸಿಲ್ಲವೆಂದು ನಾವು ಹೇಳಬಲ್ಲೆವು.

ಆಗ ಈಗ ಸಂಸ್ಕೃತ ಕನ್ನಡ ಸಂಬಂಧವನ್ನು ನಿರ್ದೇಶಿಸುತ್ತಾ ಕನ್ನಡ ಹಿರಿಯರು, ಪಂಡಿತರು, ಪ್ರೇಮಿಗಳು 'ಕನ್ನಡ ಸಂಸ್ಕೃತದ ಛಾಯೆಯಾಗಿರಲಿಲ್ಲ—ಛಾಯೆಯಾಗಿ ಇರಬೇಕಾದುದೂ ಇಲ್ಲ, ಅದು ಸ್ವತಂತ್ರವಾದ ಭಾಷೆ. ಅದಕ್ಕೆ ಸ್ವತಂತ್ರವಾದ ಭಾಷಾಶಾಸ್ತ್ರ, ಸಾಹಿತ್ಯ, ಸಂಸ್ಕೃತಿಗಳಿವೆ. ಸಂಸ್ಕೃತದಿಂದ ಕೆಲವು ಸಂದರ್ಭದಲ್ಲಿ ಬೇರೆಯಾದ ವೈಶಿಷ್ಟ್ಯವು ಕನ್ನಡಕ್ಕಿದೆ' ಎಂದು ಹೇಳುತ್ತ ಬಂದಿದ್ದಾರೆ.

ಕೆಲವು ಕನ್ನಡ ಪಂಡಿತರು ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಹೆಚ್ಚಾಗಿ ಅದು ಕೊರಗಿತು ಎಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. ಇದಕ್ಕೆ ಕನ್ನಡದಲ್ಲಿ ಹೇರಳವಾಗಿ ದೊರೆಯುವ ಚಂಪೂಕಾವ್ಯಗಳೂ,

ಜೈನ, ವೀರಶೈವ ಪುರಾಣಗಳೂ, ಬ್ರಾಹ್ಮಣ ಸಾಹಿತ್ಯಯುಗಕ್ಕೆ ಸೇರಿದ ಅನೇಕ 'ಮಹಾಕಾವ್ಯ'ಗಳೂ ಸಾಕ್ಷಿಗಳಾಗಿವೆ. ಪಂಪ, ಬಸವೇಶ್ವರ, ಗದುಗಿನ ನಾರಣಪ್ಪ, ಮುದ್ದಣಾದಿ ಕವಿಗಳು ಕಾಲಕಾಲಕ್ಕೆ ಕನ್ನಡ ಜನಕ್ಕೆ ಎಚ್ಚರ ಕೊಡುತ್ತಲೇ ಹೋಗಿದ್ದಾರೆ. ಕನ್ನಡ ಜಾನಪದದಲ್ಲಿ ಪ್ರಚಾರದಲ್ಲಿರುವ ಮಾತು, ಭಾಷೆ, ನುಡಿಹಿಡಿಗಳನ್ನು ಬಳಸಿ ಕನ್ನಡ ಸಂಸ್ಕೃತ ಸಾಗರದಲ್ಲಿ ಕೊಚ್ಚಿಹೋಗದಂತೆ ಕಾಪಾಡಿಕೊಂಡು ಬಂದಿದ್ದಾರೆ.

ರಾಜಕವಿಯಾದ ನೃಪತುಂಗದೇವ ಕನ್ನಡಿಗರ ವೈಶಿಷ್ಟ್ಯವನ್ನು ಸಾರಿಸಾರಿ ಹೇಳಿದ್ದಾನೆ. ಧರ್ಮಾಮೃತಕಾರನಾದ ನಯಸೇನ (೧೧೧೨) ಕನ್ನಡ ಕಾವ್ಯವನ್ನು ಬರೆಯುತ್ತೇನೆಂದು ಹೊರಟು ಸಂಸ್ಕೃತವನ್ನು ಬಳಸುವವನು ಕವಿಯೇ, ಬರೆದರೆ ಕನ್ನಡದಲ್ಲಿ ಬರೆಯಲಿ, ಇಲ್ಲವಾದರೆ ಸಂಸ್ಕೃತದಲ್ಲಿ ಬರೆಯಲಿ, ಎರಡನ್ನೂ ಬೆಳಸುವುದೆಂದರೆ ಎಣ್ಣೆ ತುಪ್ಪ ಗಳನ್ನು ಬೆರಸಿದಂತೆ ಎಂದು ಹೇಳಿದ್ದಾನೆ. ಕನ್ನಡ ಸಂಸ್ಕೃತಗಳನ್ನು ಬೆರಸುವುದೆಂದರೆ ಮುತ್ತು ಮೆಣಸುಗಳನ್ನು ಕೋದಂತೆ ಎಂದು ಕೇಶಿರಾಜ (೧೨೬೦) ಒಂದು ಉದಾಹರಣೆಯಲ್ಲಿ ಖಂಡಿಸಿದ್ದಾನೆ. ಹದಿಮೂರನೆಯ ಶತಮಾನದಲ್ಲಿ ಸಂಸ್ಕೃತವನ್ನು ಬೆರಸದೆ ಕನ್ನಡದಲ್ಲಿಯೇ ಕಾವ್ಯವನ್ನು ಬರೆಯಲು ಸಾಧ್ಯವೆಂದು ತೋರಿಸಲು ಆಂಡಯ್ಯನು 'ಕಬ್ಬಿಗರ ಕಾವ' ವನ್ನು ಬರೆದಿಟ್ಟಿದ್ದಾನೆ. ಸಂಸ್ಕೃತದ ಪಾಂಡಿತ್ಯವನ್ನು ಮೆಚ್ಚಿದ ಪತಿಗೆ ಮನೋರಮೆ ನೀರಿಳಿಯದ ಗಂಟಲಲ್ಲಿ ಕಡುಬನ್ನು ತುಂಬಿದಂತಾಯ್ತು ಎಂದು ಅರ್ಧ ಶತಮಾನದ ಹಿಂದೇ ಹೇಳಿದ್ದಾಳೆ. ಹೀಗೆ ಹಿಂದಿನಿಂದ ಕನ್ನಡ ವೈಶಿಷ್ಟ್ಯವನ್ನು ಕಂಡುಹಿಡಿದು ಸಾರುವ ಪರಿಪಾಠ ನಮ್ಮಲ್ಲಿ ಬಂದಿದೆ ಸಂಸ್ಕೃತ ಕನ್ನಡಿಗರ ಕುತ್ತಿಗೆಯ ಮೇಲಿನ ನೊಗವಾಗ ಬಾರದು ಎಂಬ ಭಾವನೆಯನ್ನು ಕನ್ನಡ ಕವಿಗಳು ಆಗಿಂದಾಗ್ಗೆ ವ್ಯಕ್ತ ಪಡಿಸುತ್ತ ಬಂದಿದ್ದಾರೆ.

ಆ ಮಾತನ್ನು ಒತ್ತಿಯೊತ್ತಿ ಇಂದೂ ಹೇಳಬೇಕಾಗಿದೆ. ಬೇರೆ ಭಾಷೆ ಸಾಹಿತ್ಯ ಸಂಸ್ಕೃತಿಗಳಿಂದ ಬೆಳಕು ತಿಳಿವುಗಳು ಬೇಡ ಎನ್ನುವಷ್ಟು ಅಂಥರಲ್ಲ ಕನ್ನಡಿಗರು. ಸಾಹಿತ್ಯಕ್ಕೂ, ಜನಜೀವನಕ್ಕೂ ಹೆಚ್ಚು ಸಂಬಂಧ ಬೆಳೆಯಬೇಕೆಂದು ಹಾರೈಸುವ ದಿವಸದಲ್ಲಿ ಸಂಸ್ಕೃತದ ಚಿನ್ನದ

ಸಂಕೋಲೆ ಬೇಡ ಎಂದು ಹೇಳುವುದು ಯಥಾರ್ಥವಾಗಿಯೇ ಇದೆ. ಇದನ್ನು ಸಂಸ್ಕೃತದ ಮೇಲಣ ದ್ವೇಷವೆಂದು ಯಾರೂ ಭಾವಿಸಬಾರದು. ನಮ್ಮ ಮಗು ಚೆನ್ನಾಗಲಿ ಎಂದರೆ ನೆರೆಯವರ ಮಗು ಸಾಯಲಿ ಎಂದರ್ಥವಲ್ಲ. ನಮ್ಮ ಭಾಷೆ ಸಾಹಿತ್ಯಗಳನ್ನು ಮೆಟ್ಟಿರುವ ಉಪಾಧಿಗಳನ್ನು ನಿವಾರಿಸುವ ಕರ್ತವ್ಯವನ್ನು ನಾವಲ್ಲದೆ ಮತ್ತೆ ಯಾರು ಕೈಗೊಳ್ಳಬೇಕು ?

ಸಂಸ್ಕೃತದಿಂದ ಕನ್ನಡಕ್ಕೆ ಅಪಾರವಾದ ಪ್ರಯೋಜನವಾಗಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ವೇದ, ಉಪನಿಷತ್ತು, ರಾಮಾಯಣ, ಭಾರತಗಳಿರುವುದು ಆ ಭಾಷೆಯಲ್ಲೇ ಎಂಬುದನ್ನು ಕನ್ನಡಿಗರು ಮರೆಯಲಿಲ್ಲ. ವೀರಶೈವ ವಚನಕಾರರೂ, ಹರಿದಾಸ ಪಂಥದವರೂ, ಆ ಜ್ಞಾನ ಭಂಡಾರವನ್ನೆಲ್ಲಾ 'ಲೂಟಿ' ಹೊಡೆದು ಕನ್ನಡದ ಭಂಡಾರವನ್ನು ತುಂಬುವ ಕೆಲಸವನ್ನೇ ಮಾಡಿದ್ದಾರೆ. ಇಂದು ಕನ್ನಡದಲ್ಲಿಯೇ ವೇದ ಉಪನಿಷತ್ತುಗಳಿಗೆ ಸಮಾನವಾದ ಗ್ರಂಥಗಳಾಗಬೇಕು—ಅವುಗಳನ್ನು ರಚಿಸಿದ ಮಹಾ ಋಷಿಗಳಂತಹ ವ್ಯಕ್ತಿಗಳು ನಮ್ಮ ನಾಡಿನಲ್ಲಿ ಹುಟ್ಟಬೇಕು ಎಂದು ಆಶಿಸುವುದರಲ್ಲಿ ತಪ್ಪೇನು ?

ಒಂದು ಕಾಲದ ಕನ್ನಡ ಸಂಸ್ಕೃತದ ನೆಳಲಿನಲ್ಲಿ ಬೆಳೆದಂತೆ ಇಂದು ಸಂಸ್ಕೃತ ದೇಶಭಾಷೆಗಳ ಸಹಕಾರದಿಂದ ಉಳಿಯಬೇಕಾಗಿದೆ. ಕೆಲವು ಕನ್ನಡ ಸಾಹಿತಿಗಳು ಈ ದಾರಿಯಲ್ಲಿ ದೊಡ್ಡ ಕೆಲಸವನ್ನು ಮಾಡುತ್ತಿದ್ದಾರೆ. ಭಾಸ, ಕಾಳಿದಾಸಾದಿ ಮಹಾಕವಿಗಳ ಕೃತಿಗಳ ಪರಿಚಯವನ್ನು ಮಾಡಿಕೊಡುತ್ತಿದ್ದಾರೆ. ವೇದ ಉಪನಿಷತ್ತುಗಳ ಸಾರವನ್ನು ಭಟ್ಟಿಯಿಳಿಸಿ ಕನ್ನಡಿಗರಿಗೆ ಕೊಡುತ್ತಿದ್ದಾರೆ.

ಕನ್ನಡಕ್ಕೂ ಸಂಸ್ಕೃತಕ್ಕೂ ತಾಯಿ ಮಕ್ಕಳ ಮಧುರ ಬಾಂಧವ್ಯ ಬೆಳೆದು ಬಂದಿದೆ. ಇದನ್ನು ಕನ್ನಡ ಸಾಹಿತಿಗಳು, ಬೆಳಸುತ್ತಿದ್ದಾರೆಂದೇ ನಮ್ಮ ನಂಬಿಕೆ. ಆ ದೃಷ್ಟಿಯ ಕಡೆಗೇ ಹೆಚ್ಚು ಲಕ್ಷ್ಯ ಕೊಡುವುದು ಎಲ್ಲ ವಿದ್ವತ್ಪ್ರೇಮಿಗಳ ಕರ್ತವ್ಯವೆಂದು ನಾವು ವಿನಯದಿಂದ ಸೂಚಿಸಲಿಚ್ಛಿಸುತ್ತೇವೆ.

ಕನ್ನಡ ನುಡಿ ೧೭–೨–೩೯

———

# ೧೪. ಕನ್ನಡ—ಸಂಸ್ಕೃತ ವಾದ

ವಿಶ್ವಕರ್ನಾಟಕ ಪತ್ರಿಕೆ ಕನ್ನಡ ನುಡಿಗೂ, ನಾಡಿಗೂ ಅವಿಶ್ರಾಂತವಾಗಿ ಕಾಲು ಶತಮಾನದಿಂದ ದುಡಿಯುತ್ತ ಬಂದಿದೆ. ವಿದ್ವಾಂಸರೂ, ಸಾಹಿತ್ಯಾಭಿಮಾನಿಗಳೂ ಆದ ಅದರ ಸ್ಥಾಪಕರು ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರು ಸಾಹಿತ್ಯ ಸಂಚಿಕೆಯೊಂದನ್ನು ಹೊರಡಿಸುತ್ತಿದ್ದರು. ಅದು ಕೆಲವು ವರ್ಷಗಳ ಹಿಂದೆ ನಿಂತುಹೋಯಿತು. ಈಗ ಪುನಃ ಸಾಹಿತ್ಯ ಸಂಚಿಕೆಯನ್ನು (೧೮-೧೧-೪೫) ಆರಂಭಿಸಿ ಶರ್ಮರು ಕನ್ನಡ ಸಾಹಿತ್ಯಾಭಿಮಾನಿಗಳ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಮೊದಲನೆಯ ಸಂಚಿಕೆಯಲ್ಲಿಯೇ ಶ್ರೀ ಶರ್ಮರು ವಾದಗ್ರಸ್ತವಾದ 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂಬ ಲೇಖನ ಬರೆದು ಕೆಲವು ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ. ಕರ್ಣಾಟಕ ಸಾಹಿತ್ಯ ಪರಿಷತ್ತು,-ಕನ್ನಡ ಸಾಹಿತ್ಯ ಪರಿಷತ್ತು ಎಂದು ಬಳ್ಳಾರಿಯ ಸಾಹಿತ್ಯ ಸಮ್ಮೇಳನದಲ್ಲಿ ನಾಮಾಂತರಹೊಂದಿದುದು ಶ್ರೀಯುತರ ಅವಗಾಹನೆಗೆ ಬಂದಿರಲಿಕ್ಕೆಬೇಕು.

ಕನ್ನಡ ಭಾಷೆ, ಸಾಹಿತ್ಯಗಳಿಗೆ ಸಂಬಂಧಪಟ್ಟ ಎರಡು ಸಮಸ್ಯೆಗಳನ್ನೆತ್ತಿಕೊಂಡು ಶ್ರೀಯುತರು ತಮ್ಮ ಅಭಿಪ್ರಾಯವನ್ನು ಮುಂಡಿಸಿದ್ದಾರೆ.

"ಕಾಡುನುಡಿಯ ಅವಸ್ಥೆಯಿಂದ ಮುಂದುವರಿದು ಕನ್ನಡ ಭಾಷೆಯು ಒಂದು ಮಟ್ಟದ ಸಂಸ್ಕಾರ ಹೊಂದಿತು. ಈ ಸಂಸ್ಕಾರ ಆರ್ಯಮುದ್ರೆಯುದು. ಇದನ್ನು ವಿಸ್ತಾರಗೊಳಿಸಬೇಕಾದ ಆವಶ್ಯಕತೆ ಇಲ್ಲ. ಕನ್ನಡ ಭಾಷೆಯು ದ್ರಾವಿಡವರ್ಗಕ್ಕೆ ಸೇರಿದುದೆಂದು ಒಪ್ಪೋಣ. (ಏಕೆಂದರೆ ಕನ್ನಡ ಪ್ರಾಕೃತದಿಂದ, ಸಂಸ್ಕೃತದಿಂದ ಹುಟ್ಟಿ ಬೆಳೆದುದೆಂಬ ವಾದ ಪೊಂದಿದೆ.) ಆದರೆ ದ್ರಾವಿಡ ವರ್ಗಕ್ಕೇ ಸೇರಿದ ತಮಿಳು ಭಾಷೆಯ ಲಕ್ಷಣಗಳು ಸಂಪೂರ್ಣವಾಗಿ ಕನ್ನಡಕ್ಕಾಗಲಿ ತೆಲುಗಿಗಾಗಲಿ ಇಲ್ಲ. ಕನ್ನಡ ಮತ್ತು ತೆಲುಗಿನಲ್ಲಿ ಕೆಲವು ಮಾತುಗಳನ್ನೂ, ಧಾತುಗಳನ್ನೂ, ಕೆಲವು ಭಾಷಾ ಮರ್ಯಾದೆಗಳನ್ನೂ ಬಿಟ್ಟರೆ ಉಳಿದುದೆಲ್ಲ ಸಂಸ್ಕೃತವೆ............ ತಮಿಳು ಭಾಷೆಯ ಮೇಲೆ ಸಂಸ್ಕೃತದ ಪ್ರಭಾವ ಕನ್ನಡ, ತೆಲುಗು ಭಾಷೆಗಳ ಮೇಲೆ ಬಿದ್ದ ಪ್ರಮಾಣವಲ್ಲಿ ಬೀಳಲಿಲ್ಲ."

ಕನ್ನಡನುಡಿ ಕಾಡುನುಡಿಯ ಸ್ಥಿತಿಯಿಂದ ಮುಂದುವರಿಯಿತು ಎಂದು ಹೇಳುವಾಗ ಲೇಖಕರು ಪ್ರತಿಯೊಂದು ಭಾಷೆಯ ಅವತಾರವೂ ಅದೇ ರೀತಿಯಿಂದಲೇ ಆಯಿತೆಂಬುದನ್ನು ಮರೆತಂತೆ ಕಾಣುತ್ತದೆ. ಕನ್ನಡ ನುಡಿಯೆಂದು ಈ ಸಂದರ್ಭವಲ್ಲಿ ಒತ್ತಿಹೇಳಬೇಕಾದ ಅವಶ್ಯಕತೆ ಇರಲಿಲ್ಲ. ಕನ್ನಡ ಸಂಸ್ಕೃತದಿಂದ ಹುಟ್ಟಿತೋ, ದ್ರವಿಡಭಾಷೆಗಳಿಂದ ಹುಟ್ಟಿತೋ ಎಂಬುದು ವಿವಾದಾವಸ್ಥೆಯಲ್ಲಿಯೇ ಇದೆ. ತಮಿಳು ಸಂಸ್ಕೃತಗಳಿಗಿಂತಲೂ ಕನ್ನಡ ಪುರಾತನ ಭಾಷೆ ಎಂಬ ವಾದವೊಂದನ್ನು ರೆವರೆಂಡ್ ಫಾದರ್ ಹೆರಾಸರವರು ಆರಂಭಿಸಿದ್ದಾರೆ. ಈ ಬಗ್ಗೆ ಪಂಡಿತರು ವಿಚಾರ ಮಾಡಿ ನಿರ್ಧರಿಸಬೇಕು. ಸಂಸ್ಕೃತದ ಪ್ರಭಾವ ಕನ್ನಡದ ಮೇಲೆ ಹೆಚ್ಚಾಗಿ ಆಗಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಸಂಸ್ಕೃತ ಶಬ್ದಗಳು ಹೇರಳವಾಗಿ ಕನ್ನಡದಲ್ಲಿ ಕಂಡುಬರುವುದರಿಂದ ಅದಕ್ಕೆ ಅಸ್ತಿತ್ವವೇ ಇಲ್ಲವೆನ್ನುವ ವಾದ ಫ್ರೆಂಚ್ ಮತ್ತು ಲ್ಯಾಟಿನ್ ಶಬ್ದಗಳು ಇಂಗ್ಲಿಷಿನಲ್ಲಿ ಹೇರಳವಾಗಿರುವುದರಿಂದ ಇಂಗ್ಲಿಷ್, ಫ್ರೆಂಚ್ ಅಥವಾ ಲ್ಯಾಟಿನ್ ಭಾಷೆಗಳಿಂದ ಹುಟ್ಟಿತೆನ್ನುವಷ್ಟೇ ತರ್ಕಬದ್ಧವಾಗಿದೆ. ಪ್ರಗತಿಗಾಮಿಯಾದ ಎಲ್ಲ ಭಾಷೆ, ಸಂಸ್ಕೃತಿಗಳೂ ಹೊರಭಾಷೆ, ಸಂಸ್ಕೃತಿಗಳ ಸತ್ವವನ್ನು ಹೀರಿಕೊಳ್ಳುತ್ತವೆ. ಕನ್ನಡ ಬೆಳೆಯಲು ಸಂಸ್ಕೃತವನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದೆ ಎಂಬುದು ವಿಶದವಾಗುತ್ತದೆ.

ಆದರೆ ಲೇಖಕರ ನೋಟ ಶಾಸ್ತ್ರನೋಟವಲ್ಲ. ಶಾಸ್ತ್ರನೋಟವಾಗಿದ್ದರೆ ಅದಕ್ಕೆ ಮೀಸಲಾಗಿರುವ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಒಂದು ಸವಿಸ್ತಾರ ಲೇಖನ ಬರೆದು ಅವರು ತಮ್ಮ ವಿಚಾರಗಳನ್ನು ವಿದ್ವಜ್ಜನರ ಮುಂದಿಡಬಹುದಾಗಿತ್ತು. ಅವರ ಅಂಬಿನ ಗುರಿ ಈ ಮಾತುಗಳಿಂದ ವ್ಯಕ್ತವಾಗುತ್ತದೆ.

"ಇತ್ತೀಚೆಗೆ ಹಲವರು ಕನ್ನಡ ಭಾಷೆಯ ಮೇಲೆ ಸಂಸ್ಕೃತ ಪ್ರಭಾವ ವಿಶೇಷವಾಗಿ ಬಿದ್ದು ಕನ್ನಡವು ತನ್ನ ಸ್ವರೂಪವನ್ನು ಕಳೆದುಕೊಳ್ಳುವಂತಾಗಿದೆ ಇದರಿಂದ ಕನ್ನಡದ ವ್ಯಕ್ತಿತ್ವವನ್ನು ಉಳಿಸಬೇಕು ಎಂಬುದಾಗಿ ವಾದಿಸತೊಡಗಿದ್ದಾರೆ. ಬರೀ ವಾದವಲ್ಲ. ಉದ್ದಿಶ್ಯಸಾಧನೆ

ಗಾಗಿ ಹಲವು ಪ್ರಯತ್ನಗಳನ್ನಾರಂಭಿಸಿದ್ದಾರೆ. ಈ ಪ್ರಯತ್ನಗಳಲ್ಲಿ ಈಗ ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿರುವ ಸಂಸ್ಕೃತ ಪದಗಳನ್ನು ಬಿಟ್ಟು ರೂಢಿಯಲ್ಲಿ ಇಲ್ಲದ ನಿಲ್ಲದ ಕನ್ನಡ ಪದಗಳನ್ನೇ ಹುಡುಕಿ ಹುಡುಕಿ ಬಳಸುತ್ತ ಬರುವುದು. ಕನ್ನಡಕ್ಕೂ, ತಮಿಳಿಗೂ ನಿಕಟವಾದ ಸಂಬಂಧ ವುಂಟೆಂದು ಹೇಳಿ ತಮಿಳು ಪದಗಳನ್ನು ಉಪಯೋಗ ಮಾಡುವುದು ಕಂಡು ಬರುತ್ತದೆ.

ಕನ್ನಡ ಭಾಷಾಭಿಮಾನವು ಸಂಸ್ಕೃತ ಭಾಷೆಯ ಕುರಿತ ದುರಭಿ ಮಾನದ ರೂಪವನ್ನು ತಾಳಬೇಕೇ ? ಸಂಸ್ಕೃತದಿಂದ ಕನ್ನಡಕ್ಕೆ ಉಪಕಾರ ವಾಗಿಲ್ಲವೆ ? ಸಂಸ್ಕೃತಕ್ಕೆ ಬಹಿಷ್ಕಾರ ಹಾಕುವುದರಿಂದ ಕನ್ನಡಕ್ಕೆ ನಷ್ಟ ವೆಂಬುದನ್ನು ಕನ್ನಡಿಗರು ನೆನಪಿನಲ್ಲಿಡಬೇಕು. ಸಂಸ್ಕೃತ ಶಬ್ದಗಳನ್ನು ಸಂಸ್ಕೃತ ವ್ಯಾಕರಣ, ಛಂದಸ್ಸು, ಅಲಂಕಾರ, ಸಂಸ್ಕೃತಿ ಇತ್ಯಾದಿಗಳನ್ನೆಲ್ಲ ಬಿಟ್ಟುಬಿಟ್ಟ ಮೇಲೆ ಕನ್ನಡದಲ್ಲಿ ಉಳಿಯುವುದಾದರೂ ಏನು ?"

ಕನ್ನಡ-ಸಂಸ್ಕೃತ ವಾದ ಶ್ರೀ ಶರ್ಮರು ಭಾವಿಸಿರುವಂತೆ ಇತ್ತೀಚಿನ ದಲ್ಲ. ನಮಗೆ ತಿಳಿದಂತೆ ಇದನ್ನು ಆರಂಭಿಸಿದವನು ಧರ್ಮಾಮೃತಕಾರ ನಾದ ನಯಸೇನ (೧೧೧೨) ಸಂಸ್ಕೃತ, ಕನ್ನಡ ಬೆರೆಸುವುದು ಎಣ್ಣೆ ತುಪ್ಪ ಬೆರಸಿದಂತೆ ಎಂದು ಅವನು ಹೇಳಿದ್ದಾನೆ. ಕಬ್ಬಿಗರ ಕಾವದ ಆಂಡಯ್ಯ (೧೨೩೫) ವಾದವನ್ನು ಮುಂದುವರಿಸಿ ಸಕ್ಕರೆಯಂತಹ ಸಂಸ್ಕೃತವನ್ನು ಬೆರಸದೆ ಕಾವ್ಯ ಬರೆಯಲು ಸಾಧ್ಯವಿಲ್ಲ ಎಂದು ಕವಿಗಳು ಹೇಳಿರುವರು ನಾನು ಅಚ್ಚ ಕನ್ನಡದಲ್ಲಿ ಕಬ್ಬಿಗರ ಕಾವವನ್ನು ಬರೆಯುತ್ತೇನೆ ಎಂದು ಸಾರಿದ. ಶಬ್ದಮಣಿದರ್ಪಣಕಾರನಾದ ಕೇಶಿರಾಜ (೧೨೬೦) ಸಂಸ್ಕೃತ-ಕನ್ನಡ ಬೆರಸುವುದು ಮುತ್ತು ಮೆಣಸನ್ನು ಸೇರಿಸಿ ಮಾಲೆ ಪೋಣಿಸಿದಂತೆ ಎಂದು ಅಭಿಪ್ರಾಯಪಟ್ಟ. ಸಮೀಪದವನಾದ ಮುದ್ದಣ (೧೮೭೦-೧೯೦೧) ಕನ್ನಡಿಗರಿಗೆ ಸಂಸ್ಕೃತವನ್ನು ತುರುಕುವುದು ನೀರಿಳಿಯದ ಗಂಟಲಿನಲ್ಲಿ ಕಡುಬು ತುರುಕಿದಂತೆ ಎಂದು ಟೀಕಿಸಿದ. ಆದರೆ ಈಚೆಗೆ ಈ ವಾದ ಅವತರಿಸಿದುದು ಶ್ರೀ ಬಿ. ಎಂ. ಶ್ರೀಕಂಠಯ್ಯನವರ "ಅಶ್ವತ್ಥಾಮ" ನಾಟಕಾನಂತರ. ಅವರು ಕನ್ನಡದ ವ್ಯಕ್ತಿತ್ವವನ್ನು ಎತ್ತಿ ಹಿಡಿದು ಹಲವು ಪಾಂಡಿತ್ಯಪೂರ್ಣ ಉಪನ್ಯಾಸಗಳನ್ನು ಮಾಡಿ ಕನ್ನಡಕ್ಕೂ ತಮಿ

ಳಿಗೂ ನಡೆದುಬಂದಿರುವ ಬಾಂಧವ್ಯವನ್ನೂ ಒತ್ತಿ ಹೇಳಿದರು. ಹೈದರಾಬಾದು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠದಿಂದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರು ಈ ವಾದವನ್ನು ಕೂಲಂಕಷವಾಗಿ ವಿಮರ್ಶಿಸಿದರು. ಇಲ್ಲಿಗೆ ಹೆಚ್ಚುಕಡಿಮೆ ಈ ವಾದ ನಿಂತಿತು. ಈಚೆಗೆ ವಿದ್ವಜ್ಜನರು ಯಾರೂ ಈ ವಾದಕ್ಕೆ ಕೈಹಾಕಿಲ್ಲ. ಕನ್ನಡ, ಸಂಸ್ಕೃತ ವಿದ್ವಾಂಸರು ಪರಸ್ಪರ ವಿಶ್ವಾಸದಿಂದ ಒಬ್ಬರಿಗೊಬ್ಬರು ನೆರವು ನೀಡುತ್ತ ಬಂದಿದ್ದಾರೆ. ವಾತಾವರಣ ಶುದ್ಧಗೊಂಡು ಕನ್ನಡ, ಸಂಸ್ಕೃತ ಸಾಹಿತ್ಯ ಭಕ್ತರಲ್ಲಿ ಮಧುರಬಾಂಧವ್ಯ ಏರ್ಪಡುತ್ತಿರುವಾಗ ಶ್ರೀ ಶರ್ಮರು ವಿನಾಕಾರಣ ಈ ವಾದವನ್ನೆಬ್ಬಿಸಿ ಉಭಯಪಕ್ಷದವರನ್ನೂ ಮತ್ತೆ ಕಾಳಗದ ಕಣಕ್ಕೆ ಎಳೆಯುವ ಪ್ರಯತ್ನ ಮಾಡಿರುವುದು ನೀತಿಯೂ ಅಲ್ಲ, ಶೀಲವೂ ಅಲ್ಲ.

ಕನ್ನಡ-ಸಂಸ್ಕೃತ ಬಾಂಧವ್ಯದ ಬಗ್ಗೆ ನಾವು ಮೊನ್ನೆ ಮೊನ್ನೆ (ತಾ. ೨೨-೯-೪೫) ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ವಾರ್ಷಿಕೋತ್ಸವಕ್ಕೆ ಕಳುಹಿಸಿಕೊಟ್ಟ ಸಂದೇಶವನ್ನು ಗಮನಿಸಬೇಕು.

"ಕಾಲೇಜಿನಲ್ಲಿ ಸಂಶೋಧನ ವಿಭಾಗವೊಂದನ್ನು ಏರ್ಪಡಿಸಲು ನೀವು ಪ್ರಯತ್ನಿಸುತ್ತಿದ್ದೀರಿ. ಶಿಕ್ಷಣ ಖಾತೆಯ ಮಂತ್ರಿಗಳು ನಿಮ್ಮ ಅತಿಥಿಗಳಾಗಿ ಬಂದಿರುವ ಈ ಸಂದರ್ಭದಲ್ಲಿಯೇ ಮಾತು ತೆಗೆದು ಅವರ ಸಹಕಾರವನ್ನೂ ದೊರಕಿಸಿಕೊಳ್ಳಬೇಕು. ಸುವ್ಯವಸ್ಥಿತವಾದ ಸಂಶೋಧನ ವಿಭಾಗಕ್ಕೆ ಬಹಳ ಹಣ ಬೇಕು. ನಿಮಗೆ ಐದು ಲಕ್ಷ ರೂಪಾಯಿಗಳಾದರೂ ಬೇಕು. ಇಂತಹ ಸಂಶೋಧನ ವಿಭಾಗ ಸಂಸ್ಕೃತಕ್ಕೆ ಒದಗದಿದ್ದರೆ ಮೈಸೂರಿನವರು ಕರ್ತವ್ಯಚ್ಯುತಿಯ ದೋಷಕ್ಕೆ ಒಳಗಾಗುತ್ತಾರೆ. ಸಂಸ್ಕೃತದ ಸಲುವಾಗಿ ಫ್ರಾನ್ಸ್, ಇಂಗ್ಲೆಂಡ್, ರಷ್ಯಾ ಬಹಳ ಕೆಲಸ ಮಾಡಿವೆ. ಏನು ದೌರ್ಭಾಗ್ಯ—ನಾವಿನ್ನೂ ಮೀನ ಮೇಷ ಎಣಿಸುತ್ತಿದ್ದೇವೆ. ನಮ್ಮ ದೇಶದ ಶ್ರೀಮಂತರು ಮುಂದೆ ಬಂದು ಧಾರಾಳವಾಗಿ ಧನಸಹಾಯ ಮಾಡಬೇಕು. ಮತ್ತು ಸರ್ಕಾರ ತನ್ನ ನೆರವು ನೀಡಲು ಹಿಂಜರಿಯಬಾರದು. ಕನ್ನಡ ಭಕ್ತರು ಇದಕ್ಕೆ ಸಂಪೂರ್ಣ ಸಹಕಾರ, ಸಹಾಯಗಳನ್ನು ನೀಡಲು ಸಿದ್ಧವಾಗಿದ್ದಾರೆಂದು ನಾನು ನಿಮಗೆ ಆಶ್ವಾಸನ ಕೊಡಬಲ್ಲೆ. ನಿಜವಾಗಿಯೂ ಕನ್ನಡ-ಸಂಸ್ಕೃತಕ್ಕೆ ದ್ವೇಷವಿಲ್ಲ, ವ್ಯಾಜ್ಯ

ವಿಲ್ಲ. ಎರಡೂ ವೈಭವಸಂಪನ್ನವಾದ ಪುರಾತನ ಭಾಷೆಗಳು, ಸಂಸ್ಕೃತಿಗಳು. ಪಂಡಿತರು ನಾವು ಸಂಸ್ಕೃತ ವಿರೋಧಿಗಳೆಂದು ಭಾವಿಸದಿರಲಿ. ಸಾಹಿತ್ಯರಂಗದಲ್ಲಿ ಯಾರಿಗೂ ಸರ್ವಾಧಿಕಾರ ಪಟ್ಟವಿಲ್ಲ. ಅದು ವಿಶಾಲ ಮತ್ತು ಅನಂತ."

ಸಂಸ್ಕೃತದಲ್ಲಿ ಹೆಚ್ಚು ಸಂಶೋಧನೆಯಾಗಬೇಕು. ಅದರಲ್ಲಿ ಅಚ್ಚಾಗದಿರುವ ಗ್ರಂಥಗಳು ಅಚ್ಚಾಗಬೇಕು. ಒಂದು ವ್ಯವಸ್ಥಿತ ಸಂಶೋಧನ ಶಾಖೆ ಏರ್ಪಾಡಾಗಬೇಕು ಎಂದು ಕನ್ನಡಿಗರು ಬಯಸುತ್ತಿರುವಾಗ ಸಂಸ್ಕೃತ-ಕನ್ನಡ ದ್ವೇಷವೆಲ್ಲಿಂದ ಬಂತು? ಸಂಸ್ಕೃತದ ನಿಜವಾದ ಹಿತಸಾಧಕರು ಇಂತಹ ಅನವಶ್ಯಕವಾದ ವಿವಾದಗಳನ್ನೆಬ್ಬಿಸುವ ಚಟವನ್ನು ದೂರಮಾಡಿ ಅದರ ಅವಶ್ಯಕತೆಗಳ ಕಡೆಗೆ ಲಕ್ಷ್ಯ ಕೊಡಬೇಕು.

೧. ಸಂಸ್ಕೃತದ ಒಂದು ಸಂಶೋಧನ ವಿಭಾಗದ ಸ್ಥಾಪನೆ. ಅದರ ಮೂಲಕ ಗ್ರಂಥಗಳು, ಪತ್ರಿಕೆಗಳು ಪ್ರಕಟವಾಗುವುದಕ್ಕೆ ಬೇಕಾದ ಸೌಕರ್ಯ.

೨. ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತದ ಸ್ಥಾನಮಾನಗಳನ್ನು ಹೆಚ್ಚಿಸುವುದು. ಕಡಲಾಚೆಯಿಂದ ಬಂದ ಬಿಳಿಯ ಇಂಗ್ಲಿಷ್ ಪ್ರೊಫೆಸರ್, ಅಸಿಸ್ಟೆಂಟ್ ಪ್ರೊಫೆಸರರಿಗೆ ಕೊಡುತ್ತಿರುವ ವೇತನವೇನು? ಸಂಸ್ಕೃತ ಕಾಲೇಜಿನ ಪ್ರೊಫೆಸರುಗಳಿಗೆ ಕೊಡುತ್ತಿರುವ ವೇತನವೇನು? ಇಂಗ್ಲೀಷಿಗೇತಕ್ಕೆ ಈ ಅಗ್ರಸ್ಥಾನ? ೫೦-೬೦-೭೦ ರೂಪಾಯಿಗಳ ಸಂಬಳದ ಮೇಲೆ ತರ್ಕ, ವೇದಾಂತ, ಮೀಮಾಂಸೆಗಳ ಪ್ರೊಫೆಸರುಗಳನ್ನು ನೇಮಕ ಮಾಡುವ ಸರಕಾರ, ವಿಶ್ವವಿದ್ಯಾನಿಲಯದ ನೀತಿಯನ್ನು ಯಾರಾದರೂ ಪ್ರಶ್ನಿಸಿದ್ದಾರೆಯೇ? ಸಂಸ್ಕೃತಕ್ಕೆ ವಿಶ್ವವಿದ್ಯಾನಿಲಯ ಕೊಡುತ್ತಿರುವ ಬೆಲೆ ಇದೇಯೇನು?

೩. ವಿಶ್ವವಿದ್ಯಾನಿಲಯದಲ್ಲಿ ವೇದಗಳ ಸಂಶೋಧನೆಗೆ ಒಂದು ಪ್ರತ್ಯೇಕ ಪೀಠ ಏರ್ಪಾಟಾಗಬೇಕು.

೪. ಸಂಸ್ಕೃತದಿಂದ ಕನ್ನಡಕ್ಕೆ ಅನುವಾದವಾಗದಿರುವ ಶಾಸ್ತ್ರಗ್ರಂಥಗಳು, ಲಕ್ಷಣ ಗ್ರಂಥಗಳು, ಕಾವ್ಯ—ಇವುಗಳನ್ನು ಅನುವಾದಿಸಿ ಪ್ರಕಟಿಸುವುದರ ವ್ಯವಸ್ಥೆ.

ಸಂಸ್ಕೃತಕ್ಕೆ ದೊರೆತಿರುವ ಅನಾದರಕ್ಕೆ ಕಾರಣ ಅದರ ಗುತ್ತಿಗೆ ಹಿಡಿದಿರುವ ವಿದ್ವಾಂಸರೇ ಆಗಿದ್ದಾರೆ. ಬ್ರಾಹ್ಮಣೇತರರನ್ನು ಸಂಸ್ಕೃತ ಕಾಲೇಜಿಗೆ ಸೇರಿಸುವ ಬಗ್ಗೆ ವಿದ್ವಾಂಸರು ಹೂಡಿದ ಪ್ರತಿರೋಧದ ಕತೆ ಇನ್ನೂ ನಮ್ಮ ಕಣ್ಮುಂದಿದೆ. ಪ್ರಾಗತಿಕ ಜಗತ್ತಿನ ರೀತಿ ನೀತಿಗಳನ್ನು ಅರಿತು ಸಂಸ್ಕೃತ ವಿದ್ವಾಂಸರು ಮುನ್ನಡೆಯಬೇಕು. ವಿದ್ಯೆಯನ್ನು ಮುಚ್ಚಿಟ್ಟು ಅದರ ಮೇಲೆ ಮಾಲಕೀ ಹಕ್ಕನ್ನು ಸ್ಥಾಪಿಸುವ ಕಾಲ ಹೋಯಿತು. ಸಂಸ್ಕೃತ ಉಳಿಯಬೇಕಾದರೆ ಅದರ ರತ್ನಭಂಡಾರವನ್ನು ತೆರೆದು ಎಲ್ಲರ ಮುಂದಿಡಬೇಕು.

"ಕನ್ನಡ ಭಾಷಾಭಿಮಾನವು ಸಂಸ್ಕೃತ ಭಾಷೆಯ ಬಗ್ಗೆ ದುರಭಿಮಾನವನ್ನು ತಳೆಯುವ ವರೆಗೆ ಹೋಗಿದೆ" ಎಂದು ಶ್ರೀ ಶರ್ಮರ ಆಪಾದನೆ. ಇಂದು ಸಂಸ್ಕೃತ ಸಾಹಿತ್ಯವನ್ನು ಪ್ರಚಾರ ಮಾಡಿ ಅದರ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿರುವವರು ಯಾರು? ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳಿಂದ ಆರಂಭವಾದ ಪರಂಪರೆಯನ್ನು ಶ್ರೀಗಳಾದ ಎ. ಆರ್. ಕೃಷ್ಣಶಾಸ್ತ್ರಿ, ಡಿ. ವಿ. ಗುಂಡಪ್ಪ, ವೈ. ನಾಗೇಶ ಶಾಸ್ತ್ರಿ, ಮಹಾದೇವ ಪ್ರಭಾಕರ ಪೂಜಾರ, ಎಲ್. ಗುಂಡಪ್ಪ, ಸಿ. ಕೆ. ವೆಂಕಟರಾಮಯ್ಯ, ಡಾ॥ ಎ. ಎನ್. ನರಸಿಂಹಯ್ಯ ಮೊದಲಾದ ವಿದ್ವಾಂಸರು ಕಾಪಾಡಿಕೊಂಡು ಬಂದಿದ್ದಾರೆ. ಕನ್ನಡ ವಿದ್ವಾಂಸರ ಈ ಹೃದಯವೈಶಾಲ್ಯ ಜಗತ್ತಿಗೇ ಮಾದರಿಯಾಗಿರುವ ಶ್ರೀ ಶರ್ಮರು ನಿರಾಧಾರ ಆಪಾದನೆಗಳಲ್ಲಿ ತೊಡಗಿರುವುದು ವಿಷಾದಕರ.

ಒಂದು ಕಾಲದಲ್ಲಿ ಸಂಸ್ಕೃತ ಸಾಹಿತ್ಯ ಅತ್ಯಂತ ಉಚ್ಛ್ರಾಯದಲ್ಲಿತ್ತು. ಜಗತ್ತಿನ ಹಿರಿಯ ಸಾಹಿತ್ಯ ಶ್ರೇಣಿಯಲ್ಲಿ ಸ್ಥಾನ ದೊರಕಿಸಿಕೊಂಡಿತು. ಮ್ಯಾಕ್ಸ್ ಮುಲ್ಲರ್, ಪಾಲ್‌ಡಾಯಸನ್, ಮ್ಯಾಕ್‌ಡಾನಲ್ ಮೊದಲಾದ ವಿದೇಶೀಯ ವಿದ್ವಾಂಸರಿಂದ ಸೇವೆ ದೊರಕಿಸಿಕೊಂಡಿತು. ಈಚೆಗೆ ಅದರ ಪ್ರವಾಹ ನಿಂತುಹೋಗಿದೆ. ದೇಶಭಾಷೆಗಳ ಉದ್ಧಾರಕ್ಕೆ ಆಚಾರ್ಯ ರಾಮಾನುಜರು, ವಿಶ್ವಪ್ರೇಮಿ ಬಸವಣ್ಣನವರು, ಭಕ್ತರಾಜ ಗೌರಾಂಗದೇವ, ಮಹಾರಾಷ್ಟ್ರದ ಸಂತರು, ಕರ್ನಾಟಕದ ಹರಿದಾಸರು, ವಚನಕಾರರು ಅವಿಶ್ರಾಂತವಾಗಿ ದುಡಿದರು. ಇಂದು ದೇಶಭಾಷೆಗಳು

ಚಿಗುರಿ, ಪೂತು ನಿಂತಿವೆ. ಸಂಸ್ಕೃತ ವಾಣಿ ಹಲವು ಮುಖದಲ್ಲಿ, ಹಲವು ರೂಪದಲ್ಲಿ ಕೇಳಿಬರುತ್ತಿದೆ. ಹಿಂದೆ ಸಂಸ್ಕೃತದಿಂದ ಗ್ರಂಥಗಳನ್ನು ದೇಶ ಭಾಷೆಗಳಿಗೆ ತಂದುಕೊಂಡಂತೆ, ಇಂದು ದೇಶಭಾಷೆಗಳಲ್ಲಿರುವ ಗ್ರಂಥರತ್ನ ಗಳನ್ನು ಸಂಸ್ಕೃತಕ್ಕೆ ಅನುವದಿಸಿಕೊಳ್ಳಬೇಕು. ಸಂಸ್ಕೃತ 'ಮೃತಭಾಷೆ' ಯಾಗದಂತೆ ಉಳಿಸಿಕೊಳ್ಳಬೇಕೆಂದು ಹಂಬಲಿಸುವ ಎಲ್ಲರ ಮುಂದೆಯೂ ಈ ಕಾರ್ಯವಿಧಾನ ಕಾದು ಕೂತಿದೆ.

ಸಂಸ್ಕೃತ ಶಬ್ದಗಳನ್ನು ಬಿಟ್ಟು ತಮಿಳು ಪದಗಳನ್ನು ಕನ್ನಡಕ್ಕೆ ಸೇರಿಸುತ್ತ ಬರುವುದು ಯುಕ್ತವೆ ಎಂದು ಶ್ರೀ ಶರ್ಮರು ಕೇಳುತ್ತಾರೆ. ಕನ್ನಡಕ್ಕೆ ಸಂಸ್ಕೃತ ಶಬ್ದಗಳನ್ನೇ ಸೇರಿಸಬೇಕೆಂಬ ಕಾಯಿದೆ ಏನಾದರೂ ಉಂಟೇನು? ಬೇರೆ ಭಾಷೆಗಳ ಶಬ್ದಗಳನ್ನು ಕನ್ನಡಕ್ಕೆ ತಂದುಕೊಳ್ಳಬಾರ ದೆಂಬ ವಿಧಿ ನಿಷೇಧಗಳೇನಾದರೂ ಉಂಟೇನು? ಕಾಲಗತಿಯನ್ನನುಸರಿಸಿ ಬೆಳೆಯುತ್ತಿರುವ ಕನ್ನಡ, ಸಂಸ್ಕೃತ, ತಮಿಳು, ಇಂಗ್ಲೀಷ್ ಭಾಷೆಗಳಿಂದ ಶಬ್ದಗಳನ್ನು ಎತ್ತಿಕೊಂಡು ತನ್ನ ಕೋಶಕ್ಕೆ ಸೇರಿಸಿಕೊಳ್ಳುತ್ತಿದೆ. ಶರ್ಮರು ಯೋಚಿಸುತ್ತಿರುವುದು ಪ್ರಯೋಗಪ್ರಿಯರಾದ ಕೆಲವು ವಿದ್ವಾಂಸ ರನ್ನು—ಆದರೆ ಅವರು ಟೀಕಿಸುತ್ತಿರುವುದು ಇಡೀ ಕನ್ನಡ ಸಾಹಿತ್ಯ ವರ್ಗ ವನ್ನು. ತಮಿಳಿಗೂ ಕನ್ನಡಕ್ಕೂ ಹೆಚ್ಚಿನ ಸಂಬಂಧವುಂಟೆಂದು ಭಾವಿ ಸಿರುವ ಶ್ರೀ ಬಿ. ಎಂ. ಶ್ರೀಕಂಠಯ್ಯನವರೂ ಅವರ ಶಿಷ್ಯರಾದ ಶ್ರೀಗಳಾದ ಕೆ. ವಿ. ರಾಘವಾಚಾರ್ಯರೂ, ಎಲ್. ಗುಂಡಪ್ಪನವರೂ ಇಂತಹ ಪ್ರಯೋಗ ನಡೆಸಿದ್ದಾರೆ. ಇದರಿಂದ ಯಾರಿಗೇನು ತೊಂದರೆಯಾಯಿತು? ಸಂಸ್ಕೃತಕ್ಕೆ ಅಪಚಾರವೇ—ಕನ್ನಡಕ್ಕೆ ದ್ರೋಹವೇ? ಪ್ರಾಯೋಗಿಕ ಸಾಹಿತ್ಯದ ಬಗ್ಗೆ ಶ್ರೀ ಶರ್ಮರಂತಹ ವಿದ್ವಾಂಸರೇ ಇಂತಹ ಸಂಕುಚಿತ ಮನಸ್ಕರಾದರೆ ಕನ್ನಡದಲ್ಲಿ ಹೊಸ ಪ್ರಯೋಗಗಳನ್ನು ನಡೆಸುವುದರ "ಭರತವಾಕ್ಯ" ಹೇಳಬೇಕಾದೀತು.

ಆದರೆ ಕನ್ನಡದಲ್ಲಿ "ಶುಚಿಮನೋಭಾವ"ದ ಪಂಡಿತರು ಇಲ್ಲ ವೆಂದು ನಾವು ಹೇಳುತ್ತಿಲ್ಲ. ಪರಭಾಷೆಯ ಪ್ರತಿಯೊಂದು ಶಬ್ದವನ್ನೂ ಹೆಕ್ಕಿ ತೆಗೆದು ಅವುಗಳ ಸ್ಥಾನದಲ್ಲಿ ಅಚ್ಚ ಕನ್ನಡ ಶಬ್ದಗಳನ್ನೇ ನೆಡ ಬೇಕೆಂಬ ಆಂಡಯ್ಯಮತಸ್ಥರೂ ನಮ್ಮಲ್ಲಿದ್ದಾರೆ. ಇದರಲ್ಲಿ ವಿಚಾರ

ಮಾಡಬೇಕಾದ ಅಂಶವೊಂದಿದೆ. ಕನ್ನಡದಲ್ಲಿರುವ ಶಬ್ದಸಂಪತ್ತಿಯ ಪೂರ್ಣಗ್ರಹಿಕೆಯೇ ಇನ್ನೂ ನಮಗಾಗಿಲ್ಲ. ಪಟ್ಟಣಗಳ ನಾಗರಿಕತೆ ಬೆಳೆದು ಭಾಷೆಯ ಬುಡವನ್ನೇ ನಾವು ಮರೆಯುತ್ತಿದ್ದೇವೆಂಬುದು ನಿರ್ವಿವಾದ. ಕಾಡುಗಳಲ್ಲಿ, ಹಳ್ಳಿಗಳಲ್ಲಿ ವಾಸಿಸುತ್ತಾ, ಬೇರೆ ನಾಗರಿಕತೆ, ಭಾಷಾಪರಿಚಯವಿಲ್ಲದ ಕನ್ನಡ ನಾಡವಳು ಹಲವರಲ್ಲಿ ಕನ್ನಡದ ಅಪೂರ್ವ ಶಬ್ದಭಂಡಾರವಿದೆ. ಅವುಗಳ ಅರಿವಿಲ್ಲದೆ ನಾವು ಬೇರೆ ಭಾಷೆಯ ಶಬ್ದಗಳನ್ನು ತಂದುಕೊಂಡು ಕನ್ನಡದ ನುಡಿಜಾಡನ್ನೇ ಬಿಡುತ್ತಿದ್ದೇವೆ. ರೂಢಿಯಲ್ಲಿರುವ ಕನ್ನಡ ಶಬ್ದಗಳನ್ನು ಉಪಯೋಗಿಸಬೇಕಾದುದು, ರೂಢಿ ತಪ್ಪಿರುವ ಕನ್ನಡ ಶಬ್ದಗಳನ್ನು ಮತ್ತೆ ಉಪಯೋಗಕ್ಕೆ ತಂದುಕೊಳ್ಳುವುದು ನಮ್ಮ ಕರ್ತವ್ಯ. ಹೊಸ ವಿಜ್ಞಾನ, ಶಾಸ್ತ್ರ, ಸಂಸ್ಕೃತಿಗಳ ಹೊಳೆ ಬಂದಿರುವುದರಿಂದ ಅವುಗಳಿಗೆ ಸರಿಹೋಲುವ ಶಬ್ದಗಳು ಕನ್ನಡದಲ್ಲಿಯೂ ಇಲ್ಲ. ಅಂತಹ ಸಮಯಗಳಲ್ಲಿ ಪರಭಾಷೆಯ ಶಬ್ದಗಳನ್ನೇ ಕನ್ನಡೀಕರಿಸಿಕೊಂಡು ನಾವು ಉಪಯೋಗಿಸಬಹುದು. ಬೆಳೆಯಬೇಕು, ಬದುಕಬೇಕೆಂದು ಆಶಿಸುವ ಯಾವ ಭಾಷೆ, ಸಂಸ್ಕೃತಿಯೂ ತನ್ನ ಹೆಬ್ಬಾಗಿಲನ್ನು ಮುಚ್ಚಿ ಒಳಗೆ ಕುಳಿತುಕೊಳ್ಳಲಾಗುವುದಿಲ್ಲ. ಪರಂಪರಾಗತ ಸ್ವರೂಪ, ಸಂಪ್ರದಾಯ, ಮರ್ಯಾದೆಗಳಿಗೆ ನೀರು ಬಿಟ್ಟಂತೆ ಆಗುವುದಿಲ್ಲ. ಕಾಲಚಕ್ರವಿಭ್ರಮಣಕ್ಕೆ ಸಿಕ್ಕಿ ಪರಂಪರಾಗತ ಸ್ವರೂಪ ಸಂಪ್ರದಾಯಗಳು ಅದಲುಬದಲಾಗುತ್ತಿರುವಾಗ ಕಾಲೋಚಿತವಾದ ಸ್ವರೂಪ, ಸಂಪ್ರದಾಯಗಳನ್ನು ನಾವು ರಚಿಸುತ್ತಾ ಹೋಗಬೇಕು.

ಆಧುನಿಕ ಕನ್ನಡ ಸಾಹಿತ್ಯದ ದೇಹ, ಭಾವ; ಜೀವ ಎಲ್ಲಾ ಆಂಗ್ಲವೆಂದು ಲೇಖಕರು ಶೋಧಮಾಡಿದ್ದಾರೆ. ಇದೂ ಅವಸರದ ಅಭಿಪ್ರಾಯವೇ ಆಗಿದೆ. ಆಂಗ್ಲ ಹಾಗೂ ಗ್ರೀಕ್ ಮನೋಭಾವ ಸಾಹಿತ್ಯದಲ್ಲಿರಬೇಕೆಂದು ಒಬ್ಬಿಬ್ಬರಾಡಿದ ಮಾತಿಗೆ ಲೇಖಕರು ಮುನಿದಿದ್ದಾರೆ. ಆಂಗ್ಲರ ಸ್ವತಂತ್ರ ವಿಚಾರಧೋರಣೆ ಕನ್ನಡದಲ್ಲಿ ಕಂಡುಬಂದಾಕ್ಷಣ ಅದನ್ನು ಆಂಗ್ಲಮಯ ಎಂದು ಆಕ್ಷೇಪಿಸುವುದು ಸತ್ಯಕ್ಕೆ ದೂರ. ನವೋದಯ ಕಾಲದ ಕನ್ನಡ ಸಾಹಿತ್ಯದ ಆರಂಭದೆಸೆಯಲ್ಲಿ ಆಂಗ್ಲ ಮಾದರಿಯ ಅನುಕರಣ ಕಂಡುಬಂತು. ಲೇಖಕರ ಆಕ್ಷೇಪ ಆ ಕಾಲದಲ್ಲಿ ಬಂದಿದ್ದರೆ

ಸೂಕ್ತವಾಗಿರುತ್ತಿತ್ತು. ಆದರೆ ಈ ಎರಡು ದಶಕಗಳ ಸಾಧನೆಯೊದ ತರುವಾಯ, ಪ್ರಗತಿಶೀಲ ಯುಗದಲ್ಲಿ ಇಂತಹ ಆಪಾದನೆ ಸಲ್ಲದು. ಲೇಖಕರು ಹೆಚ್ಚು ಚಿಕಿತ್ಸಾ ಬುದ್ಧಿಯಿಂದ ಆಧುನಿಕ ಸಾಹಿತ್ಯವನ್ನವಲೋಕಿಸಿದರೆ ತಮ್ಮ ಅಭಿಪ್ರಾಯವನ್ನು ಬದಲಾಯಿಸಲು ಸಾಧ್ಯವಾಗುತ್ತದೆ.

ಇನ್ನು ಕೊನೆಯ ಉಪದೇಶ ವಾಕ್ಯ. ಇತ್ತೀಚೆಗಾದ ಪ್ರಗತಿಶೀಲ ಸಾಹಿತ್ಯ ವಾದವನ್ನು ಕುರಿತು ಲೇಖಕರು

"............ವಾದ ವಿವಾದಗಳು ವಿಷಯಗೌರವ ಮೀರಿ ವ್ಯಕ್ತಿನಿಂದೆಯಿಂದ ತುಂಬಿವೆ. ಉಭಯ ಪಕ್ಷದವರಲ್ಲೂ ಹಲವರು 'ಮರ್ಯಾದೆ ಮೀರಿ' ಮಾತನಾಡುತ್ತಿದ್ದಾರೆ, ಬರೆಯುತ್ತಿದ್ದಾರೆ. ಇದು ಬಹಳ ವಿಷಾದಕರವಾದ ವ್ಯಾಪಾರ. ವಾದ ನಡೆಯಲಿ, ಗಂಭೀರವಾಗಿ ನಡೆಯಲಿ.

"ಪರಿಷತ್ಪಂಥವೊಂದೆಂದೂ ಪ್ರಗತಿಶೀಲ ಪಂಥವೊಂದೆಂದೂ ಕಲಹದ ಕೂಟಗಳೆರಡು ಏರ್ಪಡಬೇಕೆ? ಕಾಲು ಶತಮಾನದಿಂದ ಕರ್ಣಾಟಕ ಸಂಸ್ಕೃತಿ ಲೋಕದಲ್ಲಿ ಕಟ್ಟಿದ ಐಕ್ಯತೆಯ ಭವ್ಯಭವನವು ಬಿರುಕು ಬಿಡುತ್ತಿರುವುದನ್ನು ನಾವು ನೋಡುತ್ತ ಕೂಡೋಣವೇ?"

ಸನಾತನ–ನೂತನಗಳ ವಾದ ವಿವಾದ ಹೊಸದಲ್ಲ. ಕನ್ನಡ ಸಾಹಿತ್ಯ–ಸಂಸ್ಕೃತಿಯ ಕೇಂದ್ರವಾದ ಪರಿಷತ್ತಿನಲ್ಲಿಯೂ ಈ ವಾದ ವೆದ್ದಿತು. ವಿಷಯ ಸ್ವಲ್ಪ ಬಿರುಸಾಗಿಯೂ ಚರ್ಚೆಯಾಯಿತು. ಆದರೆ ಲೇಖಕರು ಭಾವಿಸಿರುವಂತೆ ಅದು ಮರ್ಯಾದೆ ಮೀರಲಿಲ್ಲ—ಹಾಗೂ ಕಲಹವಾಗಲಿಲ್ಲ. ಉಭಯ ಪಕ್ಷದವರೂ ಪರಮ ಮಿತ್ರರು. ಕನ್ನಡದ ಸೇವೆಯನ್ನು ತಮ್ಮ ಪರಮಸಾಧನೆಯೆಂದು ಭಾವಿಸಿರುವರು. ಆದರೆ ಇಬ್ಬರ ದೃಷ್ಟಿಪಥ ಒಂದೇ ಅಲ್ಲ. ಒಂದು ಮಿತವಾದ ಸಂಪ್ರದಾಯ ಪ್ರಿಯತೆ, ಇನ್ನೊಂದು ಉಗ್ರವಾದ ಕ್ರಾಂತಿಪ್ರಿಯತೆ. ವಿಚಾರಗಳ ಘರ್ಷಣೆಯನ್ನು ವಿಷಾದಕರವಾದ ವ್ಯಾಪಾರವೆಂದು ಕರೆಯುವ ಲೇಖಕರು ತಪ್ಪು ನುಡಿದಿದ್ದಾರೆ. ಪರಿಷತ್ತಿನಂತಹ ಸಂಸ್ಥೆಯಲ್ಲಿ ಇಂತಹ ವಿಚಾರ ಏಳಬೇಕು, ಚರ್ಚೆಯಾಗಬೇಕು, ಸತ್ಯ ನಿಲ್ಲಬೇಕು. ಹೀಗೆ ಹೊರಗೆ ನಿಂತು ಉಭಯ ಪಕ್ಷಗಳಿಗೂ ಹಿರಿಯನೆಂದು ಭಾವಿಸಿಕೊಂಡು ಉಪದೇಶ ಕೊಡುವ ಲೇಖಕರ ವೃತ್ತಿ ಸಾಧುವಾದುದಲ್ಲ. ಅಶ್ವತ್ಥಾಮ ಪ್ರಕರಣದಲ್ಲಿ

ವಾದವನ್ನು ತಾವು ಯಾವ ಪುಟ್ಟಕ್ಕೆ ಒಯ್ದರೆಂಬುದನ್ನು ಶ್ರೀ ಶರ್ಮರು ಜ್ಞಾಪಿಸಿಕೊಳ್ಳಲಿ.

ಎಲ್ಲ ದೇಶಗಳ ಕ್ರಾಂತಿಕಾಲದಲ್ಲಿಯೂ ಪ್ರಗತಿಶೀಲ ವಾದವೆದ್ದೇ ಏಳುತ್ತದೆ. ಇಲ್ಲಿ ಆದಂತೆ ಅದಕ್ಕೆ ಸಾಕಷ್ಟು ಪ್ರತಿಭಟನೆಯೂ ದೊರೆಯುತ್ತದೆ. ಅಂತ್ಯದಲ್ಲಿ ಎಲ್ಲರೂ ಪ್ರಗತಿಶೀಲದ ಕಡೆಗೇ ಒಲಿಯುತ್ತಾರೆ. ಪ್ರಗತಿಶೀಲನೇ ಆಗಲಿ, ಸಂಪ್ರದಾಯಪ್ರಿಯನೇ ಆಗಿರಲಿ, ಕರ್ನಾಟಕದಲ್ಲಿ ಇರುವ ಪರಿಸ್ಥಿತಿಯೇ ಬೇರೆ. ಕರ್ಣಾಟಕ ಏಕೀಕರಣ, ಕನ್ನಡ ಪ್ರಾಂತ್ಯ ಪ್ರಶ್ನೆ ನಮ್ಮೆಲ್ಲರ ಕಣ್ಮುಂದೆ ಬೃಹದಾಕಾರ ತಳೆದು ನಿಂತಿರುವಾಗ ನಾವು ನಿರರ್ಥಕ ವಾದಗಳಲ್ಲಿ, ಚರ್ಚೆಗಳಲ್ಲಿ ಆಸಕ್ತರಾಗುವುದು ಅಯುಕ್ತ. ಕನ್ನಡ ಸಾಹಿತಿಗಳಿಗೆಲ್ಲರಿಗೂ ಈ ತತ್ವ ಚೆನ್ನಾಗಿ ಗೊತ್ತುಂಟು. ಹೊರಗಿನ ಹತ್ತಾರು ಶತ್ರುಗಳನ್ನು ಒಳಗಿನ ನೂರಾರು ಶತ್ರುಗಳನ್ನೆದುರಿಸಬೇಕಾಗಿರುವಾಗ ಅವರು ಪಂಥಗಳಾಗಿ, ಬಳಗಗಳಾಗಿ ಬೇರೆ ಬೇರೆ ನಿಂತಿಲ್ಲ, ಅಣ್ಣತಮ್ಮಂದಿರಂತೆ ದುಡಿಯುತ್ತಿದ್ದಾರೆ.

ಪ್ರಗತಿಶೀಲರು ಪ್ರತಿಯೊಂದು ಸಮಯದಲ್ಲಿಯೂ ಹಿರಿಯ ಕನ್ನಡ ಭಕ್ತರಾದ ಮಾಸ್ತಿ, ಬಿ. ಎಂ. ಶ್ರೀ., ಪಂಜೆ, ಆಲೂರ್ ಮೊದಲಾದ ಮಹನೀಯರ ಹೆಸರನ್ನೆತ್ತಿಕೊಳ್ಳದೆ ಬಿಡುವುದಿಲ್ಲ. ಪ್ರಗತಿಶೀಲರಿಗೂ ಹಿರಿಯರಿಂದ ಆದರ ಗೌರವಗಳು ದೊರೆಯುತ್ತಿವೆ. ನಾವು ೫-೧೦೧ ಆದರೂ ಹೊರಗಿನ ಶತ್ರುವಿನ ಎದುರಿಗೆ ೧೦೬ ಎಂಬುದನ್ನು ಲೇಖಕರಿಗೆ ಒತ್ತಿ ತಿಳಿಸಲಿಚ್ಛಿಸುತ್ತೇವೆ.

ಶ್ರೀ ಶರ್ಮರಿಗೆ ಈ ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ ಮೈಸೂರು ಪ್ರಾಂತ್ಯ ಸಮಿತಿಯ ಅಧ್ಯಕ್ಷಸ್ಥಾನ ದೊರೆತಿತ್ತು. ಅವರು ತಮ್ಮ ಅಭಿಪ್ರಾಯಗಳನ್ನೆಲ್ಲಾ ಪರಿಷತ್ತಿನಲ್ಲಿ ಕಾರ್ಯರೂಪಕ್ಕೆ ತರಬಹುದಾಗಿತ್ತು. ತಾವು ಗೌರಿಶಂಕರದ ಮೇಲೆ ನಿಂತು ಯಾವ ಯಾವ ಉಪದೇಶಗಳನ್ನೂ ನೀಡುತ್ತಿದ್ದಾರೆಯೋ ಅವನ್ನು ಕಾರ್ಯರಂಗದಲ್ಲಿ ತರುವುದು ಹೇಗೆಂಬುದನ್ನು ತೋರಿಸಿಕೊಡಬಹುದಾಗಿತ್ತು. ಆದರೆ ಎಲ್ಲ ಅಲಂಕಾರದ ಅಧ್ಯಕ್ಷರ ಹಾಗೆಯೇ ಅವರೂ ತಮ್ಮ ಅವಧಿಯನ್ನು ಮುಗಿಸುತ್ತಿದ್ದಾರೆ. ನಮಗಿಂದು ಬೇಕಾದುದು ಉಪದೇಶವಲ್ಲ—ಕೆಲಸ. ಹಿಂದೆ ನಾವು ಪರಿಷತ್ತಿನ ಹಿರಿಯ

ರಿಗೆ ಹೇಳಿದ ಮಾತನ್ನೇ ಇಂದು ಶ್ರೀ ಶರ್ಮರಿಗೆ ಹೇಳಬಯಸುತ್ತೇವೆ. ಮಯೂರಾಸನದಿಂದ ಕೆಳಗಿಳಿಯಿರಿ, ಜನತೆಯ ಜತೆಗೆ ಬನ್ನಿ, ಕೆಲಸಗಾರರನ್ನು ಕೂಡಿಕೊಳ್ಳಿ. ಉಪದೇಶ ಕೊಡುವ ಹಿರಿಯತನವನ್ನೂ ಬಿಟ್ಟುಬಿಡಿ. ಇದು ಆಟಂ ಬಾಂಬಿನ ಯುಗ. ಜನತೆ ಕಣ್ದೆರೆದಿದೆ. ಅವರನ್ನು ಮೂಢರೆಂದು ಭಾವಿಸಿಕೊಂಡು ಹಿರಿಯತನವನ್ನು ಸ್ಥಾಪಿಸುವ ಉದ್ಯೋಗ ಸಲ್ಲುವುದಿಲ್ಲ. ಕನ್ನಡ-ಸಂಸ್ಕೃತ ಮೊದಲಾದ ಇಲ್ಲದ ಜಗಳವನ್ನೂ ಮತ್ತೆ ಹೂಡಿ ನಮ್ಮ ಸಾಹಿತ್ಯಜೀವನವನ್ನೂ ಕದಡಬೇಡಿ. ಶ್ರೀ ಶರ್ಮರೇ, ತಾವೇ ಹೇಳಿರುವಂತೆ ಎಲ್ಲ ಪಂಥಗಳ ಐಕ್ಯೈಕ ಮಂಗಳವೇದಿ, ರಾಷ್ಟ್ರವೇದಿ ಕರ್ಣಾಟಕ ಸಾಹಿತ್ಯ ಪರಿಷತ್ ಮಾಡಲೆತ್ನಿಸುತ್ತಿರುವವರ ಜೊತೆಗೆ ನಿಲ್ಲಿ. ಕನ್ನಡ ತಾಯಿಗೆ ಬೇಕಾದುದು ಲಕ್ಷಗಟ್ಟಲೆ ಸೇವಕರು, ಕೋಟಿಗಟ್ಟಳೆ ಭಕ್ತರು—ಉಪದೇಶಕರಲ್ಲ, ಹಿರಿಯರಲ್ಲ, ಸ್ವಪ್ರತಿಷ್ಠಾಪ್ರಿಯರಲ್ಲ.

ಸುಗ್ಗಿಯ ಮೈಸೂರು ೨-೧೨-೪೫

---

## ೧೫. ಕನ್ನಡ-ಮರಾಟಿ ವಾದ

ಈ ತಿಂಗಳು ೨ನೆಯ ತಾರೀಖಿನ "ಸಂಯುಕ್ತ ಕರ್ನಾಟಕ" ಪತ್ರಿಕೆಯಲ್ಲಿ ಈ ಸುದ್ದಿ ಪ್ರಕಟವಾಗಿದೆ.

"ಮೊನ್ನೆ ಮಿರಜಿಯಲ್ಲಿ ಕೂಡಿದ ದಕ್ಷಿಣ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಲನಕ್ಕೆ ಇಲ್ಲಿಂದ ಹೋದ ಶ್ರೀ. ಚಿಂಚಣಿಕರರೆಂಬ ಮರಾಟಿಗರೊಬ್ಬರು ಸಮ್ಮೇಲನದಲ್ಲಿ ಬಂದ 'ಬೆಳಗಾವಿ ಜಿಲ್ಲೆಯ ಮರಾಠಿ ಶಾಲೆಗಳಲ್ಲಿ ಕನ್ನಡವನ್ನು ಒತ್ತಾಯದಿಂದ ಕಲಿಸಬೇಕೆಂದು ಕಾಂಗ್ರೆಸ್ ಕಮಿಟಿಯವರು ಮಾಡಿದ ಠರಾವು ಮರಾಟಿಗರ ಮೇಲೆ ಜುಲುಮೆ ಇದ್ದು ಅದನ್ನು ಈ ಸಭೆಯು ನಿಷೇದಿಸುತ್ತದೆ. ಹಾಗೂ ಪ್ರಸ್ತುತ ಠರಾವನ್ನು ಕಾಂಗ್ರೆಸು ಕಮಿಟಿಯವರು ಕೂಡಲೇ ರದ್ದು ಮಾಡಬೇಕು' ಎಂಬ ಠರಾವಿನ ಬಗ್ಗೆ ಚರ್ಚೆ ನಡೆದಾಗ ಅದನ್ನು ತೀವ್ರ ವಿರೋಧಿಸಿದರಲ್ಲದೆ ಕರ್ನಾಟಕದಲ್ಲಿರುವ ಮರಾಟಿಗರು ಕನ್ನಡ ಕಲಿತರೆ ತಪ್ಪಾಗುವದಿಲ್ಲವೆಂದೂ ಅವಶ್ಯ ಕಲಿಯಲೇ

ಬೇಕೆಂದೂ ಹೇಳಿದರು. ಸ್ವಾತಾರೆಯ ಶ್ರೀ ಮಹಾಜನಿಯವರು ಅದಕ್ಕೆ ಬೆಂಬಲ ಕೊಟ್ಟು ಬೆಳಗಾವಿ ಮರಾಠಿಗರ ಕಿಡಿಗೇಡಿ ಧೋರಣವನ್ನು ಮುರಿದು ತೋರಿಸಿದರು. ಆದರೆ ಬಹುಮತದ ಬಲದಿಂದ ಠರಾವು ಪಾಸಾಯಿತು. ಅದರಂತೆ ಬೆಳಗಾವಿ ಕಾರವಾರ ಜಿಲ್ಲೆಗಳ ಮೇಲಿರುವ ಮರಾಟಿ ಹಳ್ಳಿಗಳ ಜಿಲ್ಲೆಯನ್ನೇರ್ಪಡಿಸಿ ಮಹಾರಾಷ್ಟ್ರಕ್ಕೆ ಕೂಡಿಸಬೇಕೆಂಬ ಗೊತ್ತುವಳಿಗೂ ಅವರು ವಿರೋಧಿಸಿದರೆಂದು ತಿಳಿಯುತ್ತದೆ."

ದಕ್ಷಿಣ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನದ ಪ್ರತಿನಿಧಿಗಳಿಗೆ ಇಂತಹ ನೇರವಾದ ಹಿತವಾಕ್ಯಗಳನ್ನು ಹೇಳಿದ್ದಕ್ಕೆ ನಾವು ಶ್ರೀಗಳಾದ ಚಿಂಚಣಿಕರ್ ಮತ್ತು ಮಹಾಜನಿಯವರಿಗೆ ನಮ್ಮ ಧನ್ಯವಾದಗಳನ್ನರ್ಪಿಸುತ್ತೇವೆ. ಕರ್ನಾಟಕದಲ್ಲಿ ಬಂದು ನೆಲಸಿದವರು ಯಾರೇ ಆಗಿದ್ದರೂ ಅವರು ದೇಶ ಭಾಷೆಯನ್ನು ಕಲಿತು ದೇಶೀಯರ ಜತೆಯಲ್ಲಿ ಸೌಹಾರ್ದವನ್ನು ಬೆಳಸಿಕೊಂಡು, ದೇಶದ ಸಾಂಸ್ಕೃತಿಕ, ಔದ್ಯೋಗಿಕ, ಶೈಕ್ಷಣಿಕ ಚಲನವಲನಗಳಲ್ಲಿ ಆಸಕ್ತಿ ವಹಿಸತಕ್ಕದ್ದು ಯಥಾರ್ಥವಾಗಿದೆ. ಈಗ್ಗೆ ಎರಡು ವರ್ಷಗಳ ಹಿಂದೆ ಧಾರವಾಡದ ಮಹಾರಾಷ್ಟ್ರ ಮಂಡಲದ ಗಣೇಶೋತ್ಸವಕ್ಕೆ ಆಹ್ವಾನಿತರಾಗಿ ಬಂದಿದ್ದ ಮಾಮಾ ವರೇರಕರವರು ಇವೇ ಮಾತುಗಳನ್ನು ಒತ್ತಿಯೊತ್ತಿ ಹೇಳಿ ಹೋದರು. ಕನ್ನಡ ದೇಶದಲ್ಲಿರುವ ಮಹಾರಾಷ್ಟ್ರ ಜನರು ಕನ್ನಡಿಗರೇ ಆಗಿಬಿಡಬೇಕೆಂದು ಅವರು ಹೇಳಿದರು. ಗಡಿನಾಡುಗಳಲ್ಲಿರುವ ಮಹಾರಾಷ್ಟ್ರ ಜನ ಈಗಲೂ ಉಗ್ರ ಮಹಾರಾಷ್ಟ್ರವಾದಿಗಳನ್ನು ಬಲಮಾಡಿಕೊಂಡು ಕರ್ನಾಟಕದ ವಿರುದ್ಧವಾದ ಚಳುವಳಿಯನ್ನೆಬ್ಬಿಸುತ್ತಿರುವುದು ತುಂಬ ಶೋಚನೀಯ. ಮೊನ್ನೆ ಧಾರವಾಡದಲ್ಲಿ ನಡೆದ 'ಸ್ನೇಹ ಸಮ್ಮೇಳನ'ಕ್ಕೆ ಬಂದಿದ್ದ ಕೊಲ್ಹಾಪುರದ ಪ್ರೊ. ಎನ್. ಸೀ. ಫಡಕೆಯವರು "ಕನ್ನಡಿಗರು ನಿಮ್ಮ ತಾಂಡವಕ್ಕೆ ಎಡೆಗೊಡದಿದ್ದರೆ ಪುಣೆ, ಮುಂಬಯಿಗಳಲ್ಲಿ ನಾವು ಅಲ್ಲಿರುವ ಕನ್ನಡಿಗರ ಮೇಲೆ ಅದರ ಸೇಡನ್ನು ತೀರಿಸಿಕೊಳ್ಳಬಹುದು" ಎಂದು ಬೋಧಿಸಿ ಹೋಗಿದ್ದಾರೆ. ಕನ್ನಡದ ಕೇಂದ್ರಗಳಲ್ಲಿ ಒಂದಾದ ಧಾರವಾಡದಲ್ಲಿಯೇ ಈ ಮಾತುಗಳನ್ನು ಹೇಳುವ ಎದೆಗಾರಿಕೆಯನ್ನು ಶ್ರೀ ಫಡಕೆಯವರು ತೋರಿಸಿದರೆಂದರೆ ಕನ್ನಡಿಗರ ಅಜಾಗರೂಕತೆ ಎಷ್ಟಿರಬಹುದು.

ಕನ್ನಡಿಗರು ಅನವಶ್ಯಕವಾಗಿ ಮಹಾರಾಷ್ಟ್ರದ ಬಂಧುಗಳ ಮೇಲೆ ವ್ಯಾಜ್ಯ ಹೂಡಬೇಕಾಗಿಲ್ಲ. ಕೀರ್ತಿಶೇಷ ಲೋಕಮಾನ್ಯ ತಿಲಕರು ಹೇಳಿರುವಂತೆ "ಮಹಾರಾಷ್ಟ್ರ ಬೇರೆ, ಕರ್ನಾಟಕ ಬೇರೆ ಅಲ್ಲ, ಎರಡರಲ್ಲಿಯೂ ಒಂದೇ ರಕ್ತವು ಆಡುತ್ತದೆ; ಎರಡೂ ದೇಶಗಳ ಭಾಷೆಯೂ ಒಂದೇ ಅಂದರೆ ಕನ್ನಡವಿತ್ತು" ಎಂಬುದನ್ನು ಸಮಯವರಿತು ಮಹಾರಾಷ್ಟ್ರರ ಗಮನಕ್ಕೆ ತರಬೇಕಾದುದು ನಮ್ಮವರ ಕರ್ತವ್ಯ. 'ನಮ್ಮದನ್ನು' ನಾವು ಕಾಪಾಡಿಕೊಳ್ಳುವುದೂ, ನಮ್ಮ ಸಂಸ್ಕೃತಿ, ಆತ್ಮಗೌರವಗಳನ್ನು ಉಳಿಸಿಕೊಳ್ಳುವುದಕ್ಕೂ ನಾವು ಹಿಂಜರಿಯಬಾರದು. ಕನ್ನಡಿಗರು ತಮ್ಮ ಸ್ವಾವಲಂಬನ, ಆತ್ಮಬಲಗಳ ಪರಿಚಯವನ್ನು ಮಹಾರಾಷ್ಟ್ರ ಬಂಧುಗಳಿಗೆ ಚೆನ್ನಾಗಿ ಮಾಡಿ ಕೊಡಬೇಕು.

ಕನ್ನಡ ನುಡಿ. ೧೦-೩-೩೯

---

## ೧೬. ವಿಜಯನಗರ ಯಾರದು?

ಈಗ ಸಾಗರ್ (ಬೆಂಗಳೂರು) ಚಲನಚಿತ್ರ ಮಂದಿರದಲ್ಲಿ ನಡೆಯುತ್ತಿರುವ ವಾಹಿನಿ ಕಂಪೆನಿಯವರ "ವಂದೇ ಮಾತರಂ" ಚಿತ್ರದಲ್ಲಿ ಕನ್ನಡಿಗರ ಮನ ನೋಯುವ ಕೆಲವು ಮಾತುಗಳು ಬಂದಿವೆ. ವಿಜಯನಗರವು ತಮ್ಮದೆಂದು ಆಂಧ್ರರು ಹೇಳಿಕೊಳ್ಳುವ ಒಂದು ದೃಶ್ಯವಿದೆ. ಇದನ್ನು ಖಂಡಿಸಿ ಶ್ರೀ ಎಂ. ಎನ್. ಶಿವಪ್ಪನವರು ದೈನಂದಿನ ಪತ್ರಿಕೆಗಳಿಗೆ ಹೀಗೆ ಬರೆದರು—

"ಈಗ ಬೆಂಗಳೂರು ಸಾಗರ್ ಟಾಕೀಸಿನಲ್ಲಿ ನಡೆಯುತ್ತಿರುವ 'ವಾಹಿನಿ ಪಿಕ್ಚರ್ಸ್'ನವರ 'ವಂದೇ ಮಾತರಂ' ಎಂಬ ಮಾತನಾಡುವ ತೆಲುಗು ಚಿತ್ರದ ಕಥಾಸರಣಿಯಲ್ಲಿ ಕನ್ನಡಿಗರ ಪಂಪಾಕ್ಷೇತ್ರವು (ಹಂಪೆ) ಆಂಧ್ರರ ಕ್ಷೇತ್ರವೆಂದೂ, ಆ ರಾಜ್ಯವು ಆಂಧ್ರ ರಾಜ್ಯವೆಂದೂ, ಅಲ್ಲಿರುವ ಶಿಲ್ಪಕಲೆಯು ಆಂಧ್ರರ ಶಿಲ್ಪಕಲೆಯೆಂದೂ, ಅದನ್ನು ಕಟ್ಟಿದವರು ಆಂಧ್ರರೆಂದೂ, ಅಲ್ಲಿಯ ರಾಜರು ಆಂಧ್ರೀಯರೆಂದೂ

ಆಂಧ್ರರ ಕಲಾವೈಭವಕ್ಕೂ, ಆಂಧ್ರರ ಬುದ್ಧಿಕುಶಲತೆಗೂ ಹಂಪೆಯು ನಿದರ್ಶನಕ್ಷೇತ್ರವೆಂದೂ ಕಥಾನಾಯಕರ ಮಾತಿನಿಂದ ನುಡಿಸಿದ್ದಾರೆ. ಇದನ್ನು ಕನ್ನಡಿಗರು ನೋಡಿ ಸುಮ್ಮನಿರಲಾರರು. ೧೯೩೬ ರಲ್ಲಿ ತಾನೇ ಕನ್ನಡಿಗರ ರಾಜ್ಯವಾದ ವಿಜಯನಗರ ಸಾಮ್ರಾಜ್ಯೋತ್ಸವದ ೬೦೦ ನೇ ವರ್ಷದ ನೆನಪನ್ನು ಪಂಪಾಕ್ಷೇತ್ರದಲ್ಲಿ ವೈಭವದಿಂದ ಆಚರಿಸಿದ ಮೂರನೇ ವರ್ಷದಲ್ಲಿಯೇ ಕನ್ನಡಿಗರ ಕ್ಷೇತ್ರವನ್ನು ಆಂಧ್ರರು ಆಕ್ರಮಿಸಿಕೊಳ್ಳಲು ಪ್ರಯತ್ನಿಸುತ್ತಿರುವಲ್ಲಿ ಕನ್ನಡಿಗರು ಕಣ್ಣು ಮುಚ್ಚಿಕೊಂಡು ಕುಳಿತಿರುವುದೇ? ಕನ್ನಡ ಸಾಹಿತ್ಯ ಪರಿಷತ್ತಿನವರೂ ಕರ್ಣಾಟಕ ಏಕೀಕರಣ ಸಂಘದವರೂ ಕೂಡಲೇ 'ವಾಹಿನಿ ಪಿಕ್ಚರ್ಸ್' ಕಂಪೆನಿಯವರಿಗೂ, ಮೈಸೂರು ಫಿಲ್ಮ್ ಸೆನ್ಸಾರ್ ಬೋರ್ಡಿನವರಿಗೂ ಹಾಗೆಂದು ಹೇಳುವ ಭಾಗವನ್ನು ತೆಗೆದುಹಾಕಲು ಕೇಳುವುದಕ್ಕೆ ಪ್ರಯತ್ನಿಸಬೇಕು. ಹಾಗೆ ಒಂದುವೇಳೆ ಅವರು ಅದಕ್ಕೆ ಗಮನ ಕೊಡದೆ ಇದ್ದಲ್ಲಿ ಎಲ್ಲ ಕನ್ನಡಿಗರು 'ವಂದೇ ಮಾತರಂ' ಚಿತ್ರವನ್ನು ಬಹಿಷ್ಕರಿಸಬೇಕು. ಕನ್ನಡಿಗರ ರಕ್ಷಣೆಗೆ ನಿಂತಿರುವ ಸಂಘಗಳವರು ಈಗ ಸುಮ್ಮನೆ ನಿಂತಿರುವ ಕಾಲವಲ್ಲ. ಎಲ್ಲ ಪ್ರಯತ್ನಗಳನ್ನೂ ಮಾಡಿ ಸಫಲವಾಗದಿದ್ದರೆ ಕನ್ನಡಿಗರ್ಯಾರೂ ಆ ಚಿತ್ರವನ್ನು ನೋಡಲು ಹೋಗದಂತೆ ಟಾಕೀಸಿನ ಬಳಿ 'ಪಿಕೆಟಿಂಗ್' ನಡೆಸಲು ಪ್ರಯತ್ನಿಸಬೇಕಾಗಿ ಕೋರಿಕೆ."

ಶ್ರೀ ಶಿವಪ್ಪನವರ ವಾದವನ್ನು ಸಮರ್ಥಿಸಿ 'ತಾಯಿನಾಡು' ಪತ್ರಿಕೆಯಲ್ಲಿ ನಗರಸಂಚಾರಿಗಳು ಹೀಗೆ ಬರೆದರು—

"ನಾನು ಈ ಟಾಕಿಗೆ ನೆನ್ನೆ ರಾತ್ರಿ ಹೋಗಿದ್ದೆ. ಟಾಕೀ ಮಂದಿರವನ್ನು ಪ್ರವೇಶಿಸುವಾಗ ಎಷ್ಟು ಉತ್ಸಾಹದಿಂದ ಇದ್ದೆನೋ ಟಾಕೀ ಮುಗಿದು ಈಚೆಗೆ ಹಿಂತಿರುಗುವಾಗ ಆ ಉತ್ಸಾಹ ಕುಗ್ಗಿತು. ಒಳಗೊಳಗೆ ಕ್ರೋಧಾಗ್ನಿಯೂ, ಆವೇಶವೂ ಉಕ್ಕುತ್ತಿತ್ತು. ಕನ್ನಡಿಗರಿಗೆ ಈ ರೀತಿ ಅವಮಾನವಾಯಿತಲ್ಲಾ, ಇಂತಹ ಟಾಕಿಗೆ ಫಿಲ್ಮ್ ಸೆನ್ಸಾರ್ ಬೋರ್ಡಿನವರು ಅನುಮತಿ ಕೊಟ್ಟರಲ್ಲಾ ಎಂಬ ರೋಷವು ನನ್ನಲ್ಲಿ ಹೆಚ್ಚಿತು. ಕರ್ನಾಟಕ ಸಾಮ್ರಾಜ್ಯಕ್ಕೆ ಸೇರಿದ್ದ ಪಂಪಾಕ್ಷೇತ್ರ ಆಂಧ್ರ ಸಾಮ್ರಾಜ್ಯದ್ದು ಎಂಬುದಾಗಿ ಹೇಳುವ ಈ ಟಾಕೀ ಚಾಲಕರ ಧೈರ್ಯವಾದರೂ ಎಂತಹದು ಎಂಬ ಪ್ರಶ್ನೆ

ನನ್ನಲ್ಲಿ ಎದ್ದಿದೆ. ಪಂಪಾಕ್ಷೇತ್ರವು ಕನ್ನಡಿಗರದೆಂದು ಪ್ರಪಂಚಕ್ಕೇನೇ ಗೊತ್ತು. ಇಂತಹವರಲ್ಲಿ ಅದನ್ನು ಆಂಧ್ರರು ತಮ್ಮದೆಂದು ಹೇಳಿಕೊಳ್ಳುವುದು ನಮಗೆಲ್ಲಾ ಅವಮಾನ ಮಾಡಿದಂತಾಗಿದೆ. ಹೀಗೆ ಹೇಳಿದೆನೆಂದರೆ ನಾನು ಪ್ರಾಂತೀಯ ಭಾವನೆಯವನು ಎಂಬದಾಗಿ ಹಲವರು ಆರೋಪಿಸಬಹುದು. ಆದರೆ ಆ ಸಂಕುಚಿತ ಭಾವನೆ ನನಗಿಲ್ಲ. ರಾಜಮಹೇಂದ್ರಿಯನ್ನಾಗಲೀ ಮತ್ತಾವ ಆಂಧ್ರ ಭಾಗವನ್ನಾಗಲೀ ಕನ್ನಡಪ್ರಾಂತ್ಯವೆಂದು ನಾವು ಕರೆದರೆ ಅವರು ಸುಮ್ಮನಿರುವರೇನು ? ಒಬ್ಬರಿಗೆ ಸೇರಿದ ವಸ್ತುವನ್ನು ಮತ್ತೊಬ್ಬರು ನಮ್ಮದು ಅಂದರೆ ಅಲ್ಲೇ ಬರುತ್ತದೆ ತಿಕ್ಕಾಟ. ಪಂಪಾಕ್ಷೇತ್ರವು ಖಂಡಿತ ಆಂಧ್ರರಿಗೆ ಸೇರಿದ್ದಲ್ಲ. ಯಾವುದಾದರೂ ಚಿತ್ರದಿಂದ ಜನರಲ್ಲಿ ರೋಷಭಾವವಾಗಲೀ ಕ್ರೋಧವಾಗಲೀ ಉಂಟಾದರೆ ಅಂತಹದನ್ನು ನೋಡಿ ತಿದ್ದಬೇಕೆಂಬುದಾಗಿ ಫಿಲ್ಮ್ ಸೆನ್ಸಾರ್ ಬೋರ್ಡಿನವರನ್ನು ಸರ್ಕಾರದವರು ನೇಮಿಸಿದ್ದಾರೆ. ಈ ಬೋರ್ಡಿನವರು ಇವನ್ನೆಲ್ಲಾ ನೋಡಬೇಕು. ಈ ಚಿತ್ರದಿಂದ ಕನ್ನಡಿಗರಲ್ಲಿ ಅಸಮಾಧಾನಗಳುಂಟಾಗುವುದು ಸಹಜ. ಫಿಲ್ಮ್ ಸೆನ್ಸಾರ್ ಬೋರ್ಡಿನಲ್ಲಿ ಸಾಹಿತ್ಯ ಪರಿಷತ್ತಿನ ಒಬ್ಬ ಸದಸ್ಯರೂ ಪತ್ರಿಕೋದ್ಯೋಗದಿಂದ ಒಬ್ಬ ಸದಸ್ಯರೂ ಇರಬೇಕಾದುದು ಅತ್ಯಾವಶ್ಯಕ. ಈಗಲಾದರೂ ಸರಿಯೇ ಫಿಲ್ಮ್ ಸೆನ್ಸಾರ್ ಬೋರ್ಡಿನವರು ಈ ಚಿತ್ರವನ್ನು ನೋಡಿ ಈ ಸುಳ್ಳು ಭಾಗವನ್ನು ಚಿತ್ರದಿಂದ ತೊಡೆದು ಹಾಕಬೇಕು. ಪಂಪಾಕ್ಷೇತ್ರವು ಆಂಧ್ರರಿಗೆ ಸೇರಿದ್ದೆಂಬುದು ಶುದ್ಧ ಸುಳ್ಳು. ಅದನ್ನು ಅವರು ರುಜುವಾತುಪಡಿಸಲಿ. ಫಿಲ್ಮ್ ಸೆನ್ಸಾರ್ ಬೋರ್ಡಿನವರು ಈ ಚಿತ್ರದ ವಿಷಯದಲ್ಲಿ ತೀವ್ರ ಗಮನ ಕೊಡುವಂತೆ ಕನ್ನಡ ಸಾಹಿತ್ಯ ಪರಿಷತ್ತಿನವರು ಮುಂದರಿಯಬೇಕು."

ಹಂಪೆ ಕನ್ನಡಿಗರದೆಂಬ ವಾದವನ್ನು ಕುಚೋದ್ಯ ಮಾಡುತ್ತ "ವಿಶ್ವಕರ್ಣಾಟಕ" ಪತ್ರಿಕೆಯಲ್ಲಿ (೨೭-೫-೩೯) ಒಂದು ದೀರ್ಘವಾದ ಪ್ರಧಾನ ಲೇಖನವು ಬಂದಿದೆ.

"ಹಂಪೆಯ ವಿರೂಪಾಕ್ಷ ದೇವಾಲಯ ಯಾರಿಗೆ ಸೇರಿದ್ದು ? ಕನ್ನಡಿಗರೂ ಅಲ್ಲದೆ, ತೆಲುಗರೂ ಅಲ್ಲದೆ ಇತರತಕ್ಕವರಾರೂ ಅಲ್ಲಿಗೆ ಬರುವುದಿಲ್ಲವೆ ? ಕಾಶ್ಮೀರ, ಅಯೋಧ್ಯೆ, ಕಾಶಿ, ಪ್ರಯಾಗ ಮುಂತಾದ ಕಡೆಗಳಿಂದ ಭಕ್ತರು

ಬಂದು ಕಾಣಿಕೆಗಳನ್ನರ್ಪಿಸಿದರೆ ಬೇಡವೆನ್ನುವ ಅಧಿಕಾರವನ್ನು ಕನ್ನಡಿಗ ರಾಗಲಿ ತೆಲುಗರಾಗಲೀ ವಹಿಸುವರೇ ? ಕುತ್ಸಿತವಾದ ಪ್ರಶ್ನೆಯಲ್ಲವೇ ಇದು ? ಮೊನ್ನೆ ಷಟ್ಶತಮಾನೋತ್ಸವವನ್ನು ನಡೆಸಿದ ವಿಚಾರ. ಅದಕ್ಕೆ ಮೂಲ ವಿಜಯನಗರ ಸಾಮ್ರಾಜ್ಯ ಕೇವಲ ಕನ್ನಡಿಗರ ಕಟ್ಟುಪಾಡು ಎಂಬ ಹೆಮ್ಮೆ. ಇದರ ವಿಮರ್ಶೆ ಸ್ವಲ್ಪ ದೂರ ಹೊರಡಲಿ ಸಾಕು. ಸಾಮ್ರಾಜ್ಯ ಎಂಬ ಮಾತು ನಿಜವಾದರೆ ಅದರಲ್ಲಿ ಕನ್ನಡಿಗರ ಜೊತೆಯಲ್ಲಿ ತೆಲುಗರೂ ತಮಿಳರೂ ಸೇರಲಿಲ್ಲವೇ ? ವಿಜಯನಗರದರಸರು ನಾಲ್ಕು ವಂಶಗಳಾದರೆ ಅವುಗಳಲ್ಲಿ " ನಾವು ಕೇವಲ ಕನ್ನಡಿಗರು, ತೆಲುಗರು ನಮ್ಮ ವೈರಿಗಳು, ತಮಿಳರು ನಮಗೆ ಬೇಕಾಗಿಯೇ ಇಲ್ಲ " ಎಂದ ಅರಸು ಯಾರು ? ದಕ್ಷಿಣ ಭಾರತದಲ್ಲಿ ಯಾವ ಕ್ಷೇತ್ರವನ್ನು ಅರಸರು ಬಹಿಷ್ಕರಿಸಿ ದರು ? ಯಾವ ದೇವಾಲಯವನ್ನು ಗೌರವಿಸದೆ ಬಿಟ್ಟರು ? ವಾಸ್ತವವಾಗಿ ವಿಜಯನಗರ ಸಾಮ್ರಾಜ್ಯವೆಂಬುದು ಕನ್ನಡಿಗರಿಗೆಷ್ಟು ಸೇರಿದ್ದೋ ಅಷ್ಟು ಮಾತ್ರ ತೆಲುಗರಿಗೂ ತಮಿಳರಿಗೂ ಸೇರಲಿಲ್ಲವೇ ? ಕನ್ನಡಿಗರು ಉತ್ಸವ ನಡೆಸಿದಾಗ ಅವರು ಅಡ್ಡಿ ಬಾರದಿದ್ದಿರಬಹುದು. ಆದರೆ ವಿಜಯನಗರ ಸಾಮ್ರಾಜ್ಯವೆಂಬುದು ಕನ್ನಡಿಗರ ಸರ್ವಮಾನ್ಯವೆಂಬ ಮಾತಿಗೆ ತೆಲುಗ ರಲ್ಲೂ ತಮಿಳರಲ್ಲೂ ಯಾರೂ ಅಸಮಾಧಾನಗೊಳ್ಳಲಿಲ್ಲವೆ ?

ಸದ್ಯಕ್ಕೆ ಆಂಧ್ರರ ವಿಚಾರ. ಆಂಧ್ರರಿಗೂ ವಿಜಯನಗರ ಸಾಮ್ರಾ ಜ್ಯಕ್ಕೂ ಸಂಬಂಧವಿಲ್ಲವೆಂದು ಕನ್ನಡಿಗರು ಹೇಳಬಲ್ಲರೆ ? ಒಂದುವೇಳೆ ಹೇಳಬಲ್ಲವರಾದರೂ ಹೇಳುವುದು ಯುಕ್ತವೋ ಅಯುಕ್ತವೋ ಅದು ಬೇರೆ ಮಾತು. ರಾಯಲಸೀಮ ಎಂದು ಎಲ್ಲಿಗೆ ಹೆಸರು ? ಬಳ್ಳಾರಿ, ಅನಂತ ಪುರ, ಕಡಪ, ಕರ್ನೂಲ್ ಜಿಲ್ಲೆಗಳಲ್ಲಿ ಮಾತ್ರವಲ್ಲದೆ ಚಿತ್ರದುರ್ಗ, ತುಮ ಕೂರು, ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ತೆಲುಗು ಮಾತಿನ ಸ್ಥಳ ಗಳೆಷ್ಟು ? ತೆಲುಗರೆಷ್ಟು ? ಪರೀಕ್ಷೆ ಆಗಲಿ. ವಿಜಯನಗರದ ಅರಸರ ಪ್ರತಿಷ್ಠೆ ಸ್ಮಾರಕಗಳು ತೆಲುಗು ಜನರ ಜೀವನದಲ್ಲಿ ಎಷ್ಟು ಮಾತ್ರ ಇದೆ ? ಕೃಷ್ಣದೇವರಾಯರನ್ನಲ್ಲವೆ ಅರಸರಲ್ಲಿ ಎಲ್ಲರೂ ಸ್ಮರಿಸುವುದು ? ಆ ಮಹಾರಾಯ ತೆಲುಗಿನಲ್ಲಿ ಗ್ರಂಥವನ್ನೇಕೆ ಬರೆದನು ? ಆಂಧ್ರ ಭೋಜ ನೆಂದು ಏಕೆ ಹೆಸರು ಪಡೆದನು ? ಇಂತಹ ಪ್ರಶ್ನೆಗಳಿಗೆ ಕೊನೆಮೊದಲಿಲ್ಲ.

ವಿಜಯನಗರ ಸಾಮ್ರಾಜ್ಯ ಯಾರ ಗಂಟು ಎಂಬ ಪ್ರಶ್ನೆಗೆ ನಿಜವಾದ ಉತ್ತರವೇನು ? ಮೋಹವಿಲ್ಲದೆ ಪರೀಕ್ಷೆ ಮಾಡಿದರೆ ಕಾಣುವುದೇನು ? ದಕ್ಷಿಣ ಭಾರತವೆಲ್ಲಕ್ಕೂ ಸೇರಿದ ಗಂಟೆಂಬುದು. ಕನ್ನಡಿಗರಿಗೂ ತೆಲುಗರಿಗೂ ತಮಿಳರಿಗೂ ಮಲೆಯಾಳದವರಿಗೂ ಕಡೆಗೆ ಈಗ ಮರಾಟಿಯವರಾಗಿರುವವರಿಗೂ ಸೇರಿದ್ದು. ಹಿಂದೂಗಳಿಗೂ ಮುಸಲ್ಮಾನರಿಗೂ ಇಬ್ಬರಿಗೂ ಸೇರಿದ್ದು. ವಿಶಾಲದೃಷ್ಟಿಯಿಟ್ಟರೆ ಒಟ್ಟು ಭಾರತೀಯರೆಲ್ಲರಿಗೂ ಸೇರಿದ್ದು. ಕಳೆದುಹೋದ ಕಾಷ್ಠಾವ್ಯಸನವೇಕೆನ್ನುವವರ ದೃಷ್ಟಿಯಲ್ಲಿ ವಿಜಯನಗರದ ಸಾಮ್ರಾಜ್ಯ ಯಮಧರ್ಮರಾಯನಿಗೆ ಸೇರಿದ್ದು."

ಈ ಕುತ್ಸಿತ ಟೀಕೆಯ ಹಿಂದಿರುವ ಕನ್ನಡ ದ್ವೇಷ—ಆಂಧ್ರ ಪ್ರೇಮ, ಕರ್ನಾಟಕ ಇತಿಹಾಸದ ಶೋಚನೀಯ ಅಜ್ಞಾನ ಕನ್ನಡಿಯಂತೆ ಬೆಳಗುತ್ತಿವೆ. ಕನ್ನಡ ಪತ್ರಿಕೆಯೇ ಕನ್ನಡ ಸಂಸ್ಕೃತಿಯ ಬಗ್ಗೆ ಇಂತಹ ಅಪಪ್ರಚಾರಕ್ಕೆ ನಿಂತದ್ದಕ್ಕಾಗಿ ನಾವು ದುಃಖಪಡುತ್ತೇವೆ. ಈ ಪತ್ರಿಕೆಯ ಸಂಪಾದಕರು ತಾವು ಇತಿಹಾಸಕಾರರೆಂದೂ ಕನ್ನಡ ಅಭಿಮಾನಿಗಳೆಂದೂ ಹೇಳಿಕೊಳ್ಳುತ್ತಾರೆ. ಇವರು ಕೆಲವು ಕಾಲ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಳಿಯ ಸದಸ್ಯರಾಗಿದ್ದರು. ಇವರು ಎತ್ತಿ ತೋರಿಸಿರುವ ಆಕ್ಷೇಪಗಳಿಗೆ ಕನ್ನಡ ಇತಿಹಾಸಕಾರರು ನೂರಾರು ಬಾರಿ ಸಮಾಧಾನಕರವಾದ ಉತ್ತರವನ್ನಿತ್ತಿದ್ದಾರೆ. ಆದರೂ ಅದೇ ಶುಷ್ಕ ವಾದವನ್ನು ಹೂಡಿ ಆಂಧ್ರರ ಆಕ್ರಮಣಕ್ಕೆ ಒಳಗಿನಿಂದ-ಬೆಂಬಲವನ್ನು ಕೊಡುತ್ತಿರುವ ಈ ಪತ್ರಿಕೆಯ ನೀತಿಯನ್ನು ನಾವು ಖಂಡಿಸಬೇಕಾಗಿದೆ. ಈ ಸಂದರ್ಭದಲ್ಲಿ ಕನ್ನಡಿಗರ ಆತ್ಮಗೌರವವನ್ನು ಎತ್ತಿಹಿಡಿದ ತಾಯಿನಾಡು ಪತ್ರಿಕಾಕರ್ತರನ್ನೂ, ನಗರಸಂಚಾರಿಗಳನ್ನೂ ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಶ್ರೀ ಶಿವಪ್ಪನವರು ಸೂಚಿಸುವಂತೆ ಸಾಗರ್ ಚಿತ್ರಮಂದಿರದ ಯಜಮಾನರು ಕನ್ನಡಿಗರ ಮನನೋಯುವ ಭಾಗಗಳನ್ನು ಕೂಡಲೆ "ವಂದೇ ಮಾತರಂ" ಚಿತ್ರದಿಂದ ಕಿತ್ತೊಗೆಯಬೇಕೆಂದು ನಮ್ಮ ಪ್ರಾರ್ಥನೆ. ಅವರು ನಮ್ಮ ಪ್ರಾರ್ಥನೆಯನ್ನು ಗಮನಿಸಿ ಮುಂದೆ ಫಿಲ್ಮ್ ಸೆನ್ಸಾರ್ ಬೋರ್ಡಿನವರಿಗೆ ವಿಷಯ ತಿಳಿಯುವಂತೆ ಮಾಡುವರೆಂದು ನಂಬಿದ್ದೇವೆ.

ಕನ್ನಡ ನುಡಿ ೨-೫-೩೯

———

## ಹಂಪೆ ಯಾರದು ?

ನಮ್ಮ ಜೂನ್ ೨ ನೆಯ ತಾರೀಖಿನ ಸಂಚಿಕೆಯಲ್ಲಿ ಪ್ರಕಟವಾದ ಟೀಕೆಗೆ ಉತ್ತರರೂಪವಾಗಿ 'ವಿಶ್ವಕರ್ನಾಟಕ' ಪತ್ರಿಕಾಕರ್ತರು ಜೂನ್ ೫ ನೆಯ ತಾರೀಖು ಹೀಗೆ ಬರೆದಿದ್ದಾರೆ.

"ತಪ್ಪು ನಮ್ಮದು. ವಿಜಯನಗರ ಸಾಮ್ರಾಜ್ಯ ಸಂಬಂಧವಾಗಿ ನಾವು ಬರೆದ ಲೇಖನದ ಉದ್ದಿಶ್ಯವು ಅಂತರ ಪ್ರಾಂತೀಯ ಸಖ್ಯ ಮತ್ತು ಶಾಂತಿಸಾಧನೆ. ಪ್ರತಿಯೊಂದು ಪ್ರಾಂತ್ಯಕ್ಕೂ ಸಂಬಂಧಪಟ್ಟಂತೆ ಗಡಿ ನಾಡಿನ ಸಮಸ್ಯೆ ಇದ್ದೇ ಇದೆ. ಇದು ನೆರೆಹೊರೆ ಪ್ರಾಂತ್ಯದವರಲ್ಲಿ ದ್ವೇಷಾ ಸೂಯೆಗಳನ್ನು ಹೆಚ್ಚಿಸುತ್ತಿದೆ. ಇದು ಸರಿಯಲ್ಲ. ಗಡಿಗಡಿಗಳಲ್ಲಿ ಎರಡು ಭಾಷೆಗಳಿರಬೇಕಾದುದು ಅನಿವಾರ್ಯ. ಆದಕಾರಣ ಆ ಎರಡು ಭಾಷಾ ವರ್ಗದವರೂ ಪರಸ್ಪರ ಪ್ರೀತಿ ವಿಶ್ವಾಸ ಗೌರವಗಳಿಂದ ವರ್ತಿಸಿಕೊಳ್ಳಬೇಕು. ಒಬ್ಬೊಬ್ಬರೂ ತೋಳು ತೊಡೆ ತಟ್ಟುತ್ತಲಿರುವುದು ಯೋಗ್ಯವಲ್ಲ. ಇಷ್ಟೆ ನಾವು ಹೇಳಬಯಸಿದ್ದು.

ನಮ್ಮ ದೌರ್ಭಾಗ್ಯದಿಂದ ಆ ಲೇಖನವು ನಮ್ಮ ಉದ್ದಿಶ್ಯದಿಂದ ಭಿನ್ನ ವಾದ ಅಭಿಪ್ರಾಯವನ್ನು ವಾಚಕರಲ್ಲಿ ಹುಟ್ಟಿಸಿದೆ. ಇದಕ್ಕಾಗಿ ನಾವು ಬಹಳ ವಿಷಾದಪಡುತ್ತೇವೆ.

'ಕನ್ನಡ ನುಡಿ'ಯಂತೂ ನಮ್ಮ ಮೇಲೆ "ಕನ್ನಡ ದ್ರೋಹ"ದ ಆರೋಪಣೆಯನ್ನೇ ಮಾಡಿಬಿಟ್ಟದೆ. ಕೋಪಕ್ಕೆ ಅವಕಾಶವನ್ನು ಉಂಟು ಮಾಡಿಕೊಟ್ಟ ತಪ್ಪು ನಮ್ಮದು.

'ವಿಶ್ವಕರ್ಣಾಟಕ'ವು ಹುಟ್ಟಿರುವುದು ಕರ್ಣಾಟಕದ ಸೇವೆಗಾಗಿ, ೧೫-೧೬ ವರ್ಷಗಳಿಂದ ಅದು ಮಾಡುತ್ತಿರುವುದು ಕರ್ಣಾಟಕದ ಸೇವೆ."

ಕನ್ನಡ ನುಡಿ ೧೬-೫-೩೯

# ೧೭. ಕನ್ನಡ ಸಾಹಿತ್ಯ ಮತ್ತು ಲಲಿತಕಲೆ

[ಗದುಗಿನಲ್ಲಿ ಕುಮಾರವ್ಯಾಸ ಬಳಗದ ಉದ್ಘಾಟನ ಮಾಡುವಾಗ ಕನ್ನಡ ನುಡಿಯ ಸಂಪಾದಕರಾದ ಶ್ರೀ ಅ. ನ. ಕೃಷ್ಣರಾಯರು ಮಾಡಿದ ಭಾಷಣದ ಸಾರಾಂಶ]

'ಉದಯವಾಗಲಿ ಕನ್ನಡ ನಾಡು' ಪ್ರಾರ್ಥನೆಯನ್ನು ಹೊಸಪೇಟೆಯಲ್ಲಿಯೂ ಇಲ್ಲಿಯೂ ಕೇಳಿ ನನ್ನ ಮನಸ್ಸಿನಲ್ಲಿ 'ಉದಯವಾಗಿದೆ ಕನ್ನಡ ನಾಡು' ಎಂದು ಅನ್ನಬೇಕೆಂದು ಅಭಿಲಾಷೆ. ಯಾಕೆಂದರೆ ಈಗ ೧೫ ವರ್ಷಗಳ ಹಿಂದೆ ಕನ್ನಡನಾಡು ಸುಪ್ತಾವಸ್ಥೆಯಲ್ಲಿದ್ದಾಗ ಕನ್ನಡಿಗರನ್ನು ಎಚ್ಚರಿಸಲಿಕ್ಕೆ ಹಾಡಿದ ಹಾಡಿದು. ಈಗ ಕನ್ನಡ ನಾಡು ಎಚ್ಚೆತ್ತಿದೆ. ಕನ್ನಡನಾಡಿನಲ್ಲೆಲ್ಲ ಕೂಟ, ಬಳಗ, ಗುಂಪು ಅನೇಕ ಸಾಹಿತ್ಯ ಸಂಘಗಳು ತಲೆದೋರುತ್ತಲಿವೆ. ಹರಯದವರಲ್ಲಿ ಹುಮ್ಮಸ್ಸು ಮೂಡಿದೆ, ಕಿರಿಯರಲ್ಲಿ ನವಚೈತನ್ಯ ಅಂಕುರಿಸಿದೆ. ಕನ್ನಡನಾಡು ಉದಯೋನ್ಮುಖವಾಗಿದೆ. ಶ್ರೀ ನಾರಾಯಣರಾಯರ ಬಯಕೆ ಫಲಿಸಿದೆ.

ಗದುಗು ಕುಮಾರವ್ಯಾಸನ ತಪೋಭೂಮಿ. ಕವಿಯು ಶ್ರೀ ವೀರ ನಾರಾಯಣಸ್ವಾಮಿಯ ದಿವ್ಯ ಸನ್ನಿಧಿಯಲ್ಲಿ ಆ ಮಹಾ ಕಾವ್ಯವನ್ನು ಇಲ್ಲಿಯೇ ಉಸುರಿದನು. ಕುಮಾರವ್ಯಾಸ ಭಾರತ ಕನ್ನಡದ ಕಲಶ. ಕನ್ನಡಿಗರಿಗೆ ಚೇತನ ಕೊಡುವ ಸಂಜೀವನ ಶಕ್ತಿ ಅದಕ್ಕಿದೆ. ಇಂಥ ಗಂಡುಕಾವ್ಯ ಬರೆದ ಮಹಾಕವಿ ಕುಮಾರವ್ಯಾಸ ಗದುಗಿನವನು. ನಿಜ ವಾಗಿ ಗದುಗು ಪಾವನವಾದದ್ದು. ಇಂಥ ಮಹಾಕವಿಯ ಸ್ಥಾನವನ್ನು ಸಂದರ್ಶಿಸಿಕೊಂಡು ಹೋಗಬೇಕೆಂದರೆ ವೀರನಾರಾಯಣನ ಗುಡಿಯಲ್ಲಿ ಅವನು ಕಾವ್ಯವನ್ನು ಬರೆದ ಸ್ಥಾನವಾವುದು, ಆ ಕವಿಯು ನಿಂತದ್ದು ಎಲ್ಲಿ, ಮಲಗಿದ್ದು ಎಲ್ಲಿ ಎಂಬುದು ಏನೂ ತಿಳಿಯುವಂತಿಲ್ಲ. ಏನೂ ಕುರುಹು ಗಳಿಲ್ಲ. ಆ ಅಮರಕವಿಯನ್ನು ಕುರಿತು ಒಂದು ಸ್ಮಾರಕ ಸ್ತಂಭವಾಗಲೀ ಇಲ್ಲ. ಆ ಕವಿಯ ಪ್ರಶಸ್ತಿ ಗ್ರಂಥವೂ ಕೂಡ ಇಲ್ಲದಿರುವುದು ಬಹಳ ಶೋಚನೀಯ. ಚಿರಸ್ಥಾಯಿಯಾದ ಸ್ಮಾರಕ ಸ್ಥಾಪಿಸುವುದೂ ವರ್ಷ ವರ್ಷವೂ ಆ ಕವಿಯ ಜಯಂತಿಯನ್ನು ಆಚರಿಸುವುದೂ ಗದುಗಿನವರ

ಆದ್ಯಕರ್ತವ್ಯ. ಅಂಥ ವೀರಕವಿಯ ಹೆಸರನ್ನು ಇಟ್ಟುಕೊಂಡ ಈ ಸಂಘ ವಾದರೂ ಹೆಸರಿಗೆ ತಕ್ಕಂತೆ ಆಚರಿಸುತ್ತದೆಂದು ಆಶಿಸುತ್ತೇನೆ. ಕನ್ನಡ ಸಾಹಿತ್ಯ ಸಂಸ್ಕೃತಿಗಳು ನಿನ್ನೆ ಮೊನ್ನೆಯುವಲ್ಲ. ಸಾವಿರಾರು ತಲೆಮಾರು ಗಳಿಂದ ಅನೂಚಾನವಾಗಿ ನಡೆದುಬಂದಿವೆ. ಕನ್ನಡ ತಾಯಿಯ ಬಾಳು ಬಹು ಪುರಾತನವಾದದ್ದು. ಕನ್ನಡವು ನಲಿದು, ಉಲಿದು, ಕೆಲಿದು, ಚೀತರಿಸಿ, ಚಿಗುರಿ, ಹೊಮ್ಮಿ, ಬೆಳೆದು ಬಲಿತು ಪೂತು ಮೆರೆವ ಭಾಷೆ. ಕ್ರಿಸ್ತ. ಪೂರ್ವ ೨ ಶತಮಾನಕ್ಕೆ ಮುಂಚೆ ಕನ್ನಡವು ಬದುಕಿತ್ತೆಂದು ಫಾದರ್ ಹಿರಾಸರವರು ಮಹೆಂಜದಾರೋದ ಸಂಶೋಧನದಲ್ಲಿ ಕಂಡುಹಿಡಿದಿದ್ದಾರೆ. ಅವರಲ್ಲಿ ಸಿಕ್ಕ ನಾಣ್ಯಗಳ ಮೇಲಿನ ಭಾಷೆಯು ಕನ್ನಡವೆಂದು ಸಾರಿದ್ದಾರೆ. ಗ್ರೀಕ್ ನಾಟಕಗಳಲ್ಲಿ ಕನ್ನಡದ ಮಾತು ಮತ್ತು ಗಾದೆಗಳು ಬರುತ್ತವೆ. ಇಷ್ಟು ಪ್ರಾಚೀನವಾದದ್ದು ಕನ್ನಡ. ಕನ್ನಡ ಸಂಸ್ಕೃತಿ ಸಾಹಿತ್ಯ ಶಿಲ್ಪ ಸಂಗೀತ ಮೊದಲಾದುವು ಹೊರಗಿನವರನ್ನು ಆಕರ್ಷಿಸಿದ್ದವು. ಕನ್ನಡವೂ ವಿಶ್ವಸಾಹಿತ್ಯಕ್ಕೆ ತನ್ನ ಕಾಣಿಕೆಯನ್ನು ಸಲ್ಲಿಸಿದೆ-ಸಲ್ಲಿಸುತ್ತಲಿದೆ.

ಕನ್ನಡ ಸಾಹಿತ್ಯವನ್ನು ಕುರಿತು ಹೇಳಬೇಕಾದರೆ ಕನ್ನಡ ಸಾಹಿತ್ಯ ವನ್ನು ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯವೆಂದು ಜಾತಿ ನಿರ್ದೇಶವಾಗಿ ವಿಭಾಗಿಸುವುದು ಸ್ವಾಭಾವಿಕವಲ್ಲ. ಯಾಕೆಂದರೆ ಸಾಹಿತ್ಯ, ಜಾತಿ-ಪಂಥಗಳಿಗೆ ಸೇರಿದ್ದಲ್ಲ. ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ವಿಭಾಗಿಸುವದೇ ಮೇಲು. ಪಂಪ ರನ್ನರ ಕಾಲ ಶಾಂತಿ ಕಾಲ, ನೆಮ್ಮದಿಯಾಗಿ ಇದ್ದ ಕಾಲ. ಪರದೇಶಿಯರೂ ಕೂಡ ಪುಲಿಕೇಶಿ ತೈಲಪ ಅರಸರಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದ ಕಾಲ. ಇಂಥ ಕಾಲ ವಲ್ಲಿ ಅರಸು ಆಸ್ಥಾನದ ಕವಿಗೆ ಕಾವ್ಯವನ್ನು ರಚಿಸೆಂದು ಹೇಳಿದನು. ಕವಿ ಅರಸನನ್ನೆ ನಾಯಕನನ್ನಾಗಿ ಮಾಡಿ ಸೊಗಸಾದ ಕಾವ್ಯವನ್ನು ಬರೆದನು. ಅರಸನೂ ಮೆಚ್ಚಿದನು. ಜನವೂ ಮೆಚ್ಚಿತು.

ಮುಂದೆ ಕಾವ್ಯವು ಬಂಧನಕ್ಕೆ ಒಳಗಾಯಿತು. ಅರ್ಥಕ್ಕೆ ಕುದಿದು ಅಬಲೆಯಾದ ಸರಸತಿಯ ಕತ್ತನ್ನು ಮುರಿದು. ಕಾವ್ಯವನ್ನು ರಚಿಸಲಾರಂಭಿ ಸಿದರು. ಸರಸ್ವತಿ ದ್ರೋಹಿಗಳಾದರು. ಅಷ್ಟಾದಶ ವರ್ಣನೆಗಳು. ಅರಸು, ಅರಸಿಯರೇ ನಾಯಕ ನಾಯಕಿಯರು. ಕಾವ್ಯದ ತಿರುಳು ಹೋಯಿತು.

ಕಾವ್ಯವನ್ನು ಪಂಡಿತರಿಗೆ ಹೇಳಬೇಕು. ಬೀದಿಯ ಜನರಿಗೆ ಹೇಳಲಿಕ್ಕೆ ಕಾವ್ಯವೇನು ಜನಸಾಮಾನ್ಯರದೇ ಎಂದು ಕೇಳಲಿಕ್ಕೆ ಪ್ರಾರಂಭಿಸಿದರು. ವೈದ್ಯ, ಜ್ಯೋತಿಷ್ಯ ಮೊದಲಾದ ಶಾಸ್ತ್ರೀಯ ವಿಷಯಗಳೂ ಕವಿತೆಯಲ್ಲಿಯೇ ಆದವು. ಹೀಗಾಗಿ ಜನಸಾಮಾನ್ಯಕ್ಕೂ ಸಾಹಿತ್ಯಕ್ಕೂ ಸಂಬಂಧವೇ ತಪ್ಪಿಹೋಯಿತು. ಮುಂದೆ ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು ಬಂದರು. ಧರ್ಮದಲ್ಲಿ ಕ್ರಾಂತಿಯಾಯಿತು. ಅದರಂತೆ ಸಾಹಿತ್ಯದಲ್ಲಿಯೂ ಹೊಸ ಬೆಳಕು ಬಂದಿತು. ಒಬ್ಬ ಮಹಾನುಭಾವನ ಸಂಪರ್ಕದಿಂದ ಜನಜೀವನವು ಚೇತನಗೊಂಡಿತು. ಆಚಾರ—ವಿಚಾರ, ಉಡುಗೆ-ತೊಡಿಗೆಗಳು ಬದಲಾದುವು. ನಡೆ, ನುಡಿ, ವ್ಯವಹಾರ ಮತ್ತು ಸಾಹಿತ್ಯದಲ್ಲಿ ಹೊಸತು ಬಂದಿತು. ಬಸವಣ್ಣನವರು ಮನೆಯ ಮಾತಿನ ಮುದ್ದಾದ ಕನ್ನಡದಲ್ಲಿ ತಿಳಿವನ್ನು ನೀಡಿದರು. ಒಂದು ಅಲಂಕಾರವಿಲ್ಲ. ಒಂದು ಕವಿ ಸಮಯವಿಲ್ಲ. ಹೃದಯದಿಂದ ಬಂದದ್ದು ನೇರವಾಗಿ ಹೃದಯವನ್ನು ಹೊಕ್ಕಿತು. ಸಾಹಿತ್ಯದಲ್ಲಿ "ಚಂಪು"ಗಳು ಹೋದುವು. ರಗಳೆ, ಸಾಂಗತ್ಯ, ಷಟ್ಪದಿ, ತ್ರಿಪದಿಗಳು ಹೊರಹೊಮ್ಮಿದವು. ಪ್ರಭುಲಿಂಗಲೀಲೆ, ಮೊದಲಾದ ಕಾವ್ಯಗಳು ಬಂದವು. ಮುಂದೆ ಷಡಕ್ಷರಿಯಂತಹ ಕವಿಗಳು ಬಂದು ರಾಜಶೇಖರವಿಳಾಸಾದಿ ಕಾವ್ಯಗಳನ್ನು ಬರೆದರು. ಸಾಹಿತ್ಯ ಜನಸಾಮಾನ್ಯಕ್ಕೆ ನಿಲುಕದಂತಾಯಿತು. ಕುಮಾರವ್ಯಾಸನಂತಹ ಕ್ರಾಂತಿಯ ಕವಿಯು ಬಂದು ಕಾವ್ಯವನ್ನು ಬರೆದನು. ಹೀಗೆ ಕನ್ನಡ ಸಾಹಿತ್ಯವು ಅನೇಕ ಮಾರ್ಗಗಳನ್ನು ತುಳಿದು ಬಂದಿದೆ. ಇಂದು ಕನ್ನಡ ಸಾಹಿತ್ಯ ಬೇರೆ ಮಾರ್ಗವನ್ನು ಹಿಡಿದಿವೆ. ಸಂಗೀತ ವಿಷಯದಲ್ಲಿ ಹೇಳಬೇಕಾದರೆ ದಕ್ಷಿಣಾದಿ ಸಂಗೀತ ಕರ್ನಾಟಕ ಸಂಗೀತವೆಂದು ಮೆರೆಯಿತು. ಈಗ ಕರ್ನಾಟಕದಲ್ಲಿ ಕರ್ನಾಟಕ ಸಂಗೀತವನ್ನು ಕೇಳುವವರಿಲ್ಲ. ಹೆಸರು ಕರ್ನಾಟಕ ಸಂಗೀತ, ಅನ್ನುವವರು ತಮಿಳರು, ಹಾಡು ತೆಲುಗು ಹೀಗಾಗಿದೆ ಕನ್ನಡ ಸಂಗೀತದ ಅವಸ್ಥೆ ಮೈಸೂರಿನಲ್ಲಿ. ಈಚೆಗೆ ಮರಾಠಿಯನ್ನೂ ಹಿಂದಿಯನ್ನೂ ಅನ್ನಬೇಕು. ಹೆಸರು ನೋಡಿದರೆ ಭೀಮಸೇನ, ನೋಡಲಿಕ್ಕೆ ನರಪೇತ ನಾರಾಯಣ, ಹೀಗಾಗಿದೆ ನಮ್ಮ ಕನ್ನಡ ಸಂಗೀತದ ಅವಸ್ಥೆ. ನಮ್ಮ ಜನರಲ್ಲಿಯೇ ನಮ್ಮ ಸಂಗೀತದ ವಿಷಯಕ್ಕೆ ಆಸಕ್ತಿ ಇಲ್ಲ.

ಜನರಲ್ಲಿ ಪುರಸ್ಕಾರವಿಲ್ಲ. ಮಲ್ಲಿಕಾರ್ಜುನ ಮನ್‌ಸೂರ್ ಪುಣೆ, ಡಿಲ್ಲಿ ಕಡೆಗೆ ಮರಾಠಿ ಹಿಂದಿ ಹಾಡುಗಳನ್ನು ಅಂದು ಬದುಕಬೇಕು. ಮೈಸೂರ ಕಡೆ, ಚೌಡಯ್ಯ, ವೀಣೆ ಕೇಶವಮೂರ್ತಿಗಳು ತೆಲಗು, ತಮಿಳು ಹಾಡುಗಳನ್ನು ಅಂದು ಮದ್ರಾಸ, ತಿರುಚನಾಪಲ್ಲಿಗಳಲ್ಲಿ ಹೊಟ್ಟೆತುಂಬಿಕೊಳ್ಳಬೇಕು. ದಕ್ಷಿಣಾದಿ ಸಂಗೀತಕ್ಕೆ ಗುರು ನಮ್ಮ ಪುರಂದರದಾಸರು. ಅಂಥವರು ಹಾಡಿ ನಲಿದು ಕುಣಿದ ನಾಡಿನಲ್ಲಿ ತ್ಯಾಗರಾಜರ ಮರಾಠಿಗರ ಹಾಡುಗಳನ್ನು ಕೇಳುವ ಪ್ರಸಂಗ ಬಂದಿತು.

ಚಿತ್ರಕಲೆಯಲ್ಲಿ ಶಿಲ್ಪದಲ್ಲಿಯೂ ಹೀಗೆಯೆ. ಅಜಂತೆಯಲ್ಲಿಯ ಚಿತ್ರಗಳನ್ನು ಬರೆದವರು ಕನ್ನಡಿಗರು. ಆ ಚಿತ್ರಕಲೆಯನ್ನು ಇಂದು ಜಗತ್ತು ಹೊಗಳುತ್ತದೆ. ಬೇಲೂರಿನ ಶಿಲಾಬಾಲಿಕೆಯರನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ನಮ್ಮವರು ಕಲ್ಲನ್ನು ಅಳಿಸಿದ್ದಾರೆ, ನಗಿಸಿದ್ದಾರೆ; ಶಿಲೆಯಲ್ಲವಿದು, ಕಲೆಯ ಬಲೆ ಎಂದು ಎನಿಸುತ್ತದೆ. ಇದು ಕಲ್ಲು ಅಲ್ಲ, ಮೇಣವೆಂದು ತೋರುತ್ತದೆ. ಈಗಾದರೂ ನಮ್ಮಲ್ಲಿ ಶಿಲ್ಪಿಗಳು ಇದ್ದಾರೆ. ಮೈಸೂರಿನ ಸಿದ್ದಲಿಂಗ ಸ್ವಾಮಿಗಳು ಕಾವೇರಿಯ ಮೂರ್ತಿಯನ್ನು ಮಾಡಿದ್ದಾರೆ. ಕನ್ನಡಿಗರು ನೋಡಬೇಕು. ಮೈಸೂರು ವೆಂಕಟಪ್ಪನವರು, ಹುಬ್ಬಳ್ಳಿಯ ಕಮಡೋಳಿಯವರ ಪ್ರಕೃತಿ ಚಿತ್ರಗಳನ್ನು ನೋಡಬೇಕು. ಇಂಥ ಕನ್ನಡಿಗರ ಚಿತ್ರಗಳು ಪರಪ್ರಾಂತ, ಪರದೇಶಗಳಲ್ಲಿ ಮಾನ್ಯತೆ ಪಡೆಯಬೇಕು. ನಮ್ಮಲ್ಲಿಲ್ಲ. ಕಮಡೋಳಿಯವರು ಪ್ರಪಂಚದ ಶ್ರೇಷ್ಠ ಚಿತ್ರಕಾರರಿಗೆ ಸರಿಗಟ್ಟುತ್ತಾರೆಂದು ಧೈರ್ಯವಾಗಿ ಹೇಳಬಹುದು. ಇಂಥ ಚಿತ್ರಗಳನ್ನು ಕನ್ನಡಿಗರು ನೋಡಬೇಕು, ಚಿತ್ರಗಾರರನ್ನು ಪುರಸ್ಕರಿಸಬೇಕು.

ನಮ್ಮ ಕನ್ನಡಿಗರು ಆಕ್ಸ್‌ಫರ್ಡ, ಪ್ಯಾರಿಸ್, ಲಂಡನ್‌ಗಳಲ್ಲಿ ಪ್ರಸಿದ್ಧಿಹೊಂದಿ ಕೀರ್ತಿ ತಂದಿದ್ದಾರೆ. ನಮ್ಮಲ್ಲಿ ಅವರಿಗೆ ಮಾನ್ಯತೆ ಇಲ್ಲ. ನಮ್ಮ ಜನರಲ್ಲಿದ್ದ ಗುಣಗಳನ್ನು ಹುಡುಕಿ ಬೆಳಕಿಗೆ ತರಬೇಕು. ಹೊರಗಿನವರು ದೊಡ್ಡವರೆಂದ ಮೇಲೆ ಅವರು ಮುದ್ರೆಯನ್ನು ಒತ್ತಿದ ಮೇಲೆ ನಾವು ಒಪ್ಪಿಕೊಳ್ಳುತ್ತೇವೆ. ಪಂಡಿತ ತಾರಾನಾಥರಾಯರಿಗೆ ಅಮೇರಿಕದಿಂದ ಕರೆ ಬಂದಮೇಲೆ ನಮ್ಮವರು ಕಣ್ಣುದೆರೆದು ನೋಡಿದರು.

ಕನ್ನಡಿಗರಾದ ನಾವು ನಮ್ಮ ಅನುಚಾನಸವಾದ ಸಂಸ್ಕೃತಿಯನ್ನು ಕಾಯ್ದು ಕೊಳ್ಳಬೇಕು. ಆಂಧ್ರರು, ಮರಾಠಿಗರು ನಮ್ಮನ್ನು ಆಕ್ರಮಿಸುತಿದ್ದಾರೆ. ಅವರನ್ನು ತಡೆಯಬೇಕು. ಮರಾಠಿಗರಲ್ಲಿ ಆಂಧ್ರರಲ್ಲಿಯ ಸಂಘಟನಾ ಶಕ್ತಿಯನ್ನೂ ಅಭಿಮಾನವನ್ನೂ ಕಲಿಯಬೇಕು. ಕನ್ನಡವನ್ನು ಪ್ರೀತಿಸಿ ದರೆ, ಭಾರತವನ್ನು ಮರೆತಂತಲ್ಲ. ತಾಯಿಯ ಒಂದು ಅಂಗವು ಪುಷ್ಟ ವಾದರೆ ತಾಯಿಯು ಪುಷ್ಟವಾದಂತೆ ಅಲ್ಲವೇ ? ಕನ್ನಡ, ತೆಲಗು, ಮರಾಠಿ, ಬಂಗಾಲಿಗಳು ಪುಷ್ಟವಾದರೆ ತಾಯಿಯಾದ ಭಾರತವು ಬೆಳೆದಂತೆ ಅಲ್ಲವೆ ? ಕನ್ನಡಿಗರಲ್ಲಿ ಕವಿಗಳಿದ್ದಾರೆ ಸಂಗೀತಗಾರರೂ ಇದ್ದಾರೆ; ಶಿಲ್ಪಿಗಳು ಚಿತ್ರಕಾರರು ಎಲ್ಲರೂ ಇದ್ದಾರೆ; ವಿದ್ಯೆ ಇದೆ, ಬುದ್ಧಿಯಿದೆ ಆದರೆ ಐಕ ಮತ್ಯವಿಲ್ಲ. ಎಲ್ಲ ಕಲೆಗಳಲ್ಲಿಯೂ ನಮ್ಮತನವನ್ನು ನಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಳ್ಳಬೇಕು. ನಮ್ಮ ದೇವರು ಕನ್ನಡ, ನಾವು ಕನ್ನಡ ಕುಲ ದವರು, ನಮ್ಮ ಮಾತು ಕನ್ನಡ. ನಮಗೆ ಉಳಿದ ಜಾತಿಪಂಥಗಳು ಬೇಡ, ಕನ್ನಡಿಗರು ಒಂದೇ. ಕನ್ನಡತಾಯಿಯ ಬಾವುಟವನ್ನು ಇನ್ನೊಮ್ಮೆ ಎತ್ತಿ ಮೆರೆಸುವ. ಕನ್ನಡಕ್ಕೆ ಜಯವಾಗಲಿ.

ಕನ್ನಡ ನುಡಿ. ೧೦-೩-೩೯

---

## ೧೮. ಕಾದಂಬರಿ—ಸಣ್ಣ ಕತೆ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಣ್ಣ ಕಥೆ, ಭಾವಗೀತೆಗಳಿಗೆ ದೊರೆಯುತ್ತಿರುವ ಪ್ರಾಶಸ್ತ್ಯದಿಂದ ಅದರ ಇತರ ಅಂಗಾಂಗಗಳು ಬಡ ವಾಗುತ್ತಿವೆಯೆಂಬ ಮಾತು ಅಲ್ಲಲ್ಲಿ ಕೇಳಬರುತ್ತಲೇ ಇದೆ. ಧಾರವಾಡದ ಶ್ರೀ ಭಾಗವತರೂ ಅದನ್ನು ಕಳೆದವಾರ 'ಕನ್ನಡ ನುಡಿ'ಯಲ್ಲಿ ವ್ಯಕ್ತ ಪಡಿಸಿದ್ದಾರೆ. ಸಣ್ಣ ಕಥೆಗಳನ್ನು ಬರೆಯುವುದು ಸುಲಭ, ಆದುದ ರಿಂದಲೇ ಎಲ್ಲರೂ ಅದಕ್ಕೇ ಕೈಹಾಕುತ್ತಾರೆ ಎಂದು ಕೆಲವರ ಮತ.

ಸಣ್ಣ ಕಥೆಗಳಿಗೆ ಕನ್ನಡ ಸಾಹಿತ್ಯದಲ್ಲಿ ಇತ್ತೀಚೆಗೆ ಬಹಳ ಬೆಲೆ ಬಂದಿರುವುದೇನೋ ನಿಜ. ಕೆಲವು ಸಲ ಅವು ಬೇರೆ ಬಗೆಯ ಸಾಹಿತ್ಯ

ನಿರ್ಮಾಣಕ್ಕೆ ಅಡ್ಡಿಬಂದಿರುವುದೂ ನಿಜ. ಶ್ರೀನಿವಾಸರಂತಹ ಪ್ರತಿಭಾ ಶಾಲಿಗಳು ಹಾಕಿಕೊಟ್ಟ ಹೆದ್ದಾರಿಯನ್ನು ತುಳಿಯಬೇಕೆಂಬ ಆಸೆ ಬಹಳ ಜನಗಳ ಮನಸ್ಸಿನಲ್ಲಿ ಹುಟ್ಟುವುದು ಸಹಜವೇ ಆಗಿದೆ. ಆದರೆ ಇದಕ್ಕೆ ನಾವು ಮರುಗಬೇಕಾಗಿಲ್ಲ. ಭಾರತವರ್ಷದ ಇತರ ಪ್ರಾಂತ್ಯಗಳ ಕಥಾ ಸಾಹಿತ್ಯಕ್ಕಿಂತಲೂ ಮಿಗಿಲಾದ ಸಾಹಿತ್ಯ, ಜಗತ್ತಿನ ಕಥಾಸಾಹಿತ್ಯಕ್ಕೆ ಸರಿ ಸಮನಾಗಿ ನಿಲ್ಲಬಹುದಾದ ಕಥಾಸಾಹಿತ್ಯ ನಮ್ಮಲ್ಲಿ ಹುಟ್ಟಿದೆಯೆಂದು ನಾವು ಹೆಮ್ಮೆಪಡಬಹುದು. ಸಣ್ಣಕಥೆಯ ಬೆಳೆ ಇಷ್ಟು ಹುಲುಸಾಗಿ ಬರುವುದಕ್ಕೆ ಅದರ ರಚನೆ ಸುಲಭವೆಂಬ ಭಾವನೆಯು ಕೆಲವರ ಮನಸ್ಸಿನಲ್ಲಿದೆ. ಸಣ್ಣ ಕಥೆಗಳನ್ನು ಓದುವುದೆಷ್ಟು ಸುಲಭವೋ ಬರೆಯುವುದಷ್ಟು ಸುಲಭವಲ್ಲ. ಇಂಗ್ಲೆಂಡ್, ಅಮೇರಿಕಾ, ಫ್ರಾನ್ಸ್ ದೇಶಗಳ ಆಧುನಿಕ ಸಾಹಿತ್ಯವನ್ನೊಮ್ಮೆ ನೋಡಿದರೆ ಉತ್ತಮ ಸಣ್ಣ ಕಥಾಲೇಖಕರು ಬಹಳ ಜನ ದೊರೆಯುವುದಿಲ್ಲ. ಆದರೆ ಉತ್ತಮ ಕಾದಂಬರಿಕಾರರು ಹೇರಳವಾಗಿ ದೊರೆಯುತ್ತಾರೆ. ರಚನೆ, ಕಲಾಪಾಕ, ರಸಸಿದ್ಧಿ, ಆನಂದಾನುಭವ ಎಲ್ಲವರಲ್ಲಿಯೂ ಸಣ್ಣ ಕಥೆಗೆ ಪ್ರತ್ಯೇಕ ಸ್ಥಾನ ಸ್ವರೂಪಗಳಿವೆ. ಅದನ್ನು ಸಾಧಿಸುವುದು ಬಹಳ ಕಷ್ಟ. ಕಿರಿದರೊಳು ಪಿರಿದರ್ಥಮಂ ಸಾಧಿಸುವ ಈ ಕಲೆ ಕನ್ನಡಿಗರಿಗೆ ಕರತಲಾಮಲಕವಾಗಿರುವುದಕ್ಕೆ ನಮ್ಮ ನಾಡಿನ ಸಂಸ್ಕೃತಿಯ ವೈಶಿಷ್ಟ್ಯವೇ ಕಾರಣ. ಕನ್ನಡದೇಶದಲ್ಲಿ ಹೊಸ ಹುಟ್ಟು ಹಬ್ಬಿತು; ಹೊಸ ಸಾಹಿತ್ಯವನ್ನು ನಿರ್ಮಾಣಮಾಡುವ ಲವಲವಿಕೆ ಉಂಟಾಯಿತು. ಆ ಕಾಲದಲ್ಲಿ ಮಾರ್ಗದರ್ಶಿಗಳಾಗಿ ಶ್ರೀನಿವಾಸರು ಬಂದರು. ಅವರು ಸಣ್ಣ ಕಥೆಗಳ ಮಾರ್ಗವನ್ನವಲಂಬಿಸಿದರು. ನಾಡಿನ ಎಲ್ಲ ಶಕ್ತಿಯೂ ಆ ಮಾರ್ಗವಾಗಿ ಹರಿಯಲಾರಂಭವಾಯಿತು.

ಸಂಕ್ಷಿಪ್ತ ಸ್ವರೂಪವನ್ನು ಪಡೆದಿರುವ ಸಣ್ಣ ಕಥೆಗೆ ಕಾದಂಬರಿಗಿರುವ ಅನುಕೂಲ್ಯವೂ ಇಲ್ಲ, ಅವಕಾಶವೂ ಇಲ್ಲ. ಅಲ್ಲಿ ಬಿಡಿಯಾಗಿ ಹೇಳಬಹುದಾದುದನ್ನು ಇಲ್ಲಿ ಇಡಿಯಾಗಿ ಹೇಳಬೇಕಾಗುತ್ತದೆ. ಅಲ್ಲಿ ವಿಸ್ತರಿಸಬೇಕಾದುದನ್ನು ಇಲ್ಲಿ ಸಂಕ್ಷೇಪಿಸಬೇಕಾಗುತ್ತದೆ. ಕಾದಂಬರಿಯನ್ನು ಒಂದು ಊರಿಗೆ ಹೋಲಿಸಿದರೆ ಸಣ್ಣ ಕಥೆಯನ್ನು ಒಂದು ಮನೆಗೆ ಹೋಲಿಸಬಹುದು. ಕಾದಂಬರಿ ಸಣ್ಣ ಕಥೆಗಳು ಸಾಹಿತ್ಯದ ಬೇರೆಬೇರೆ ಆರೋತ್ತರ

ಗಳನ್ನು ಪೂರೈಸುತ್ತವೆ. ಅವುಗಳ ರಸಾನುಭವದಲ್ಲಿ ಉಂಟಾಗುವ ಆನಂದವೂ ಬೇರೆಬೇರೆ ಸ್ವರೂಪವನ್ನು ತಾಳುತ್ತದೆ. ಕಾದಂಬರಿ ದೊಡ್ಡದು, ಹೆಚ್ಚು ಆನಂದ ಕೊಡುತ್ತದೆ; ಸಣ್ಣ ಕಥೆ ಚಿಕ್ಕದು, ಕಡಮೆ ಆನಂದವನ್ನು ಕೊಡುತ್ತದೆ ಎಂದು ಭಾವಿಸುವುದು ನ್ಯಾಯಸಮ್ಮತವಾಗಲಾರದು. ಮೋಪಸಾ, ಓಹೆನ್ರಿ, ಚೇಕಫ್ ಮೊದಲಾದವರ ಕಥೆಗಳಿಂದ ಆಗುವ ಆನಂದ ಅನೇಕ ಕಾದಂಬರಿಗಳಿಂದಾಗುವುದಿಲ್ಲ. ಕಾದಂಬರಿ ರಸವನ್ನು ಪೃಥಕ್ಕರಿಸಿ ಹರಡಿ, ಚೆಲ್ಲಿ, ಹಂಚಿದರೆ ಸಣ್ಣ ಕಥೆ ಒಗ್ಗೂಡಿಸಿ, ಕೇಂದ್ರೀಕರಿಸಿ, ನೇರವಾಗಿ ಹೃದಯದಲ್ಲಿ ಮೂಡುತ್ತದೆ. ಕಥೆ, ಕಾದಂಬರಿಗಳನ್ನು ಓದುವ ಕಾಲಗಳನ್ನು ಓದುಗನು ತನ್ನ ಮನಸ್ಸಿನ ಸ್ಥಿತಿಯನ್ನರಿತು ನಿರ್ಣಯಿಸಿಕೊಳ್ಳಬೇಕಾಗುತ್ತದೆ.

ಕಾದಂಬರಿ ಎಲ್ಲಿ ಸುಳಿದು, ಏನನ್ನು ಕಂಡುಬಂದರೂ ಓದುಗನನ್ನು ಒಂದೇ ಎಡೆಗೆ ಒಯ್ದು ಅವನ ಚಿತ್ತದ ಮೇಲೆ ಒಂದು ಭಾವನೆ, ವಿಚಾರ, ಚಿಂತೆ, ರಸದ ಚಿತ್ರವನ್ನು ಮೂಡುತ್ತದೆ. ಓದುಗ ಆ ವಿಶಾಲ ಪ್ರಪಂಚದಿಂದ ತನಗೆ ಬೇಕಾದ ಅಂಶವನ್ನು ಮಾತ್ರ ಆಯ್ದುಕೊಳ್ಳುತ್ತಾನೆ. ಕಾದಂಬರಿಯಲ್ಲಿನ ಎಲ್ಲ ಅನುಭವಗಳನ್ನೂ ಅವನು ಪಡೆದರೂ ಅವನ ಹೃದ್ಭಿತ್ತಿಯ ಮೇಲೆ ಮೂಡುವುದು ಯಾವದಾದರೂ ಒಂದು ಚಿತ್ರ. ಆ ಕೆಲಸವನ್ನು ಸಣ್ಣ ಕಥೆಯೂ ಮಾಡುತ್ತದೆ. ಕಾದಂಬರಿಯಲ್ಲಿ ಹುಡುಕುವುದಕ್ಕೆ ಆಯುವುದಕ್ಕೆ ವಿಂಗಡಿಸುವುದಕ್ಕೆ ಅವಕಾಶವಿದೆ, ಸಣ್ಣ ಕಥೆಯಲ್ಲಿ ಅದು ಸಾಧ್ಯವಿಲ್ಲ.

ಕಾದಂಬರಿಗಳು ಹೆಚ್ಚು ಬೆಳೆಯುವುದಕ್ಕೆ ಕನ್ನಡ ನಾಡಿನ ಆರ್ಥಿಕ ಸ್ಥಿತಿಯೂ ಕಾರಣವಾಗಿದೆ. ಇಂಗ್ಲೆಂಡಿನಲ್ಲಿ ಕಾದಂಬರಿಗಳು, ಫ್ರಾನ್ಸಿನಲ್ಲಿ ಸಣ್ಣ ಕಥೆ, ಜರ್ಮನಿಯಲ್ಲಿ ಜೀವನಚಿತ್ರಗಳ ಪ್ರಭಾವ ಹೆಚ್ಚು. ಆ ದೇಶಗಳಲ್ಲಿ ಕಥೆ, ಕಾದಂಬರಿ, ಜೀವನಚರಿತ್ರೆಗಳು ಬೆಳೆಯಲು ಅವರ ರಾಜಕೀಯ, ಸಾಮಾಜಿಕ ಸ್ಥಿತಿಗಳೇ ಮೂಲಕಾರಣಗಳಾಗಿವೆ. ಕನ್ನಡದೇಶದಲ್ಲಿ ಬರೆದುದನ್ನು ಅಚ್ಚುಹಾಕುವ ಸಮಸ್ಯೆ ಬಗೆಹರಿಯದಿರುವಾಗ ದೊಡ್ಡ ದೊಡ್ಡ ಕಾದಂಬರಿಗಳನ್ನು ಬರೆಯುವುದೂ ಅಚ್ಚುಹಾಕುವುದೂ ವಿರಳವಾಗಿವೆ. ಕಥೆಗಳು ಚಿಕ್ಕವಾದುದರಿಂದ ಅವುಗಳಿಗೆ ಪತ್ರಿಕೆಗಳಲ್ಲಿ ಎಡೆ

ದೊರೆಯುತ್ತದೆ. ಹೀಗೆ ಪ್ರಕಟವಾದ ಕಥೆಗಳನ್ನು ಸಂಗ್ರಹಿಸಿ ಪುಸ್ತಕ ರೂಪವಾಗಿ ಪ್ರಕಟಿಸುವುದು ಸ್ವಾಭಾವಿಕವಾಗಿದೆ.

ಕನ್ನಡದಲ್ಲಿ ಕಾದಂಬರಿ ಸಾಹಿತ್ಯ ಹೆಚ್ಚು ಬೆಳೆಯಬೇಕು. ಸಣ್ಣ ಕಥೆ ಭಾವಗೀತೆಗಳ ಕಡೆಗೇ ನೋಡುತ್ತಿರುವ ಸಾಹಿತಿಗಳು ಈ ಸಾಹಿತ್ಯಾಂಗವನ್ನು ಪುಷ್ಟಿಗೊಳಿಸಲು ಯತ್ನಿಸಬೇಕು. ಹೆಚ್. ಜಿ. ವೆಲ್ಸ್‌ರವರಂತೆ ವೈಜ್ಞಾನಿಕ ತತ್ವಗಳನ್ನೂ, ಡಾ|| ಕ್ರೋನಿನ್‌ರವರಂತೆ ವೈದ್ಯಕೀಯ ತತ್ವಗಳನ್ನೂ, ರಷ್ಯಾದ ಕಾದಂಬರಿಕಾರರಂತೆ ಆರ್ಥಿಕ ಸಮಸ್ಯೆಗಳನ್ನೂ ಕಾದಂಬರಿಯಲ್ಲಿ ವಿವೇಚಿಸಬಹುದು. ಸಾಮಾನ್ಯ ಜನತೆಗೆ ಗಹನ ತತ್ವ ವಿಚಾರ, ಜೀವನ ಸಮಸ್ಯೆಗಳ ಪರಿಚಯ ಮಾಡಿಕೊಡಲು ಕಾದಂಬರಿಗಿಂತಲೂ ಉತ್ತಮ ಸಾಧನವಿಲ್ಲ.

ಸಾಕಷ್ಟು ಸಾಹಿತ್ಯ ಪ್ರಚಾರವಾಗಿ ಪ್ರಕಟವಾಗುವ ಗ್ರಂಥದಿಂದ ಅಚ್ಚಿನ ವೆಚ್ಚವಾದರೂ ಬರುತ್ತದೆಂಬ ಧೈರ್ಯ ಬರುವವರೆಗೂ ಕನ್ನಡ ಸಾಹಿತ್ಯ ಬೆಳೆಯುವುದು ಕಷ್ಟ. ಕಥೆ, ಕಾದಂಬರಿ, ನಾಟಕ ಮೊದಲಾದ ಮನರಂಜಕ ಸಾಹಿತ್ಯವನ್ನು ಪ್ರಕಟಿಸುವುದಕ್ಕೇ ಪ್ರಕಾಶಕರು ಮುಂದೆ ಬರುವ ಧೈರ್ಯ ಮಾಡುವಹಾಗಿಲ್ಲ. ಇನ್ನು ಗಹನ ಹಾಗೂ ವಿಚಾರ ಸಾಹಿತ್ಯದ ಗತಿಯೇನು ?

ಕನ್ನಡ ಓದಿ ಬರೆಯುವವರ ಸಂಖ್ಯೆ ಹೆಚ್ಚಾಗಬೇಕು—ಅವರಿಗೆ ಕನ್ನಡ ಓದುವ ಆಸೆ ಹುಟ್ಟಬೇಕು—ಅವರ ಅನುಕೂಲಕ್ಕೆ ತಕ್ಕಹಾಗೆ ಪುಸ್ತಕಗಳು ದೊರೆಯಬೇಕು—ಪುಸ್ತಕಗಳು ಅಗ್ಗವಾಗಿಯೂ ಅಂದವಾಗಿಯೂ ಇರಬೇಕು—ಇವು ಸಾಧ್ಯವಾದರೆ ನಮ್ಮ ಸಾಹಿತ್ಯ ತಲೆಯೆತ್ತಬಹುದು. ಸಾಹಿತಿಗಳು ಬದುಕಬಹುದು.

ಕನ್ನಡ ನುಡಿ ೧೪-೪-೩೯

———

# ೧೯. ತರುಣ ಸಾಹಿತಿಗಳಿಗೊಂದು ಮಾತು

ಜಗತ್ತಿನ ಇತಿಹಾಸದಲ್ಲಿ ೧೯೪೦-೪೫ ಈ ಐದು ವರ್ಷಗಳು ಚಿರ ಸ್ಮರಣೀಯ. ಜಗತ್ತನ್ನೇ ಕಬಳಿಸಿ ಅನಂತ ಕಷ್ಟ-ನಷ್ಟಗಳಿಗೆ ಗುರಿ ಮಾಡಿದ ಸಂಗ್ರಾಮ; ಅದನ್ನೆದುರಿಸಿ ಜನತಾ ಬಲವನ್ನು ಸಾರಿದ ರಷ್ಯಾ, ಅಮೇರಿಕಾ, ಇಂಗ್ಲೆಂಡ್ ರಾಷ್ಟ್ರಗಳ ವೀರಮನೋವೃತ್ತಿ, ಇವೆರಡೂ ನಮ್ಮ ಕಣ್ಣು ತೆರೆಸಿವೆ. ರಷ್ಯದ ಜಯ ಜಗತ್ತಿನ ಸಾಮಾನ್ಯ ಜನತೆಯ ಜಯವೇ ಆಗಿದೆ. ಜನತೆಯ ಸಂಘಟಿತ ಶಕ್ತಿಯ ಮುಂದೆ ಫಾಸಿಸ್ಟ್ ನಾಝೀ ಪಡೆಗಳು ಸೋತು ಸಾಗಬೇಕಾಯಿತು. ಅಳಿಯುತ್ತಿರುವ ರೂಢಿ ಸಂಪ್ರದಾಯದ ಪ್ರತೀಕವೆಂದು ನಾವು ಫಾಸಿಸಂ, ನಾಝೀಸಂಗಳನ್ನು ಗ್ರಹಿಸಿದರೆ, ಉದಯೋನ್ಮುಖವಾಗಿರುವ ಜನತಾ ರಾಜ್ಯದ ಪ್ರತೀಕವೆಂದು ಸಾಮ್ಯವಾದವನ್ನು ಪರಿಗ್ರಹಿಸಬೇಕಾಗುತ್ತದೆ. ಈ ವಿಜಯ ಹೊಸ ತತ್ವದ, ಹೊಸ ಧರ್ಮದ, ಹೊಸ ಜೀವನದ ಪಲ್ಲವಿಯಾಗಿದೆ. ತರುಣರ ಮಹಾ ತ್ಯಾಗಕ್ಕೆ ದೊರೆತ ಪ್ರತಿಫಲವಾಗಿದೆ.

ಯುದ್ಧವನ್ನು ಗೆದ್ದವರು ತರುಣರು. ಬಾಳನ್ನು ಗೆಲ್ಲಬೇಕಾದವರೂ ಅವರೇ. ಅವರ ಸಿದ್ಧತೆ, ದೃಷ್ಟಿಯನ್ನವಲಂಬಿಸಿದೆ ನಾಳಿನ ಜಗತ್ತು. ತರುಣರ ದೃಷ್ಟಿ, ಐರೋಪ್ಯ ದೇಶಗಳಲ್ಲಿರುವಂತೆ ಭಾರತವರ್ಷದಲ್ಲಿಯೂ ಸಾಮ್ಯವಾದದ ಕಡೆ ತಿರುಗಿದೆ. ರೂಢಿಯ ಹೆಸರಿನಲ್ಲಿ ನಡೆಯುವ ಪ್ರತಿಯೊಂದು ಅತ್ಯಾಚಾರ, ದಬ್ಬಾಳಿಕೆ, ಕ್ರೌರ್ಯವನ್ನು ಅವರು ಎದುರಿಸುತ್ತಿದ್ದಾರೆ. ಬಾಳು, ಸಾಹಿತ್ಯ ಒಡಹುಟ್ಟಿದವು. ಬಾಳಿನಲ್ಲಿ ಯಾವ ಧ್ವನಿಯೋ ಸಾಹಿತ್ಯದಲ್ಲಿಯೂ ಅದೇ ಧ್ವನಿ ಎದ್ದಿದೆ. ಪ್ರಗತಿಶೀಲ ಸಾಹಿತ್ಯ ಅದರ ಪಾಂಚಜನ್ಯ. ಪ್ರಗತಿಶೀಲವೆನ್ನುವ ಪದವನ್ನು ಒಪ್ಪದವರೂ ಅದರ ತತ್ವಗಳಿಗೆ ಮಣಿಯುತ್ತಿದ್ದಾರೆ. ಇಂದಿನ ತರುಣರ ರನ್ನಗನ್ನಡಿ ಪ್ರಗತಿಶೀಲ ಸಾಹಿತ್ಯ. ಆ ಪಂಜನ್ನು ಹಿಡಿದು ಅವರು ಮುಂವೆ ನುಗ್ಗಬೇಕೆಂದು ಆಶಿಸುವದರಲ್ಲಿ ಆಶ್ಚರ್ಯವೇನು?

ಪ್ರಗತಿಶೀಲ ಸಾಹಿತ್ಯವನ್ನು ಅರ್ಥಮಾಡಿಕೊಂಡವರಿಗಿಂತಲೂ ಅದರ ಮೇಲೆ ರಾಡಿ ಎರಚಿದವರೇ ಹೆಚ್ಚು. ಈ ಕೀರ್ತಿ ಪ್ರತಿಗಾಮಿಗಳಿಗಿಂತಲೂ

ಪ್ರಗತಿಗಾಮಿಗಳಿಗೇ ಹೆಚ್ಚು ಸಲ್ಲತಕ್ಕದ್ದಾಗಿದೆ. ಒಂದುಕಡೆ ಪ್ರಗತಿಶೀಲರನ್ನು ಹಳಿಯುವ ತಂಡ, ಇನ್ನೊಂದುಕಡೆ ಅದನ್ನು ತಮ್ಮ ಸ್ವಪ್ರತಿಷ್ಠೆಗೆ ಬಳಸಿಕೊಳ್ಳುವ ಬಳಗ. ಎರಡೂ ಬೆಳೆದಿದೆ. ಅಂತಹವರಿಬ್ಬರಿಗೂ ಪ್ರಗತಿಶೀಲ ಸಾಹಿತ್ಯದ ತತ್ವಗಳು ಅರ್ಥವಾಗಿಲ್ಲ.

ಸಾಹಿತ್ಯವೆಂದರೆ ಪ್ರಗತಿ. ಪ್ರಗತಿಯನ್ನು ಬಿಟ್ಟು ಸಾಹಿತ್ಯವಿಲ್ಲವೆನ್ನುವ ವಾದ ಯುಕ್ತವಾದವಲ್ಲ, ಯುಕ್ತಿವಾದ. ಇಂತಹ ಸಾಹಿತ್ಯ ಹಿಟ್ಲರನ ಆಳ್ವಿಕೆಯಲ್ಲಿ ನಾಝೀ ಜರ್ಮನಿಯಲ್ಲಿ ಅಖಂಡವಾಗಿ ಬೆಳೆಯಿತು. ನೀಷೆ, ಮ್ಯಾಕೆವಿಲಿ, ಬಿಸ್ಮಾರ್ಕ್, ವ್ಯಾಗ್ನರ್ ಮಹಾಕವಿಗಳಾದರು. ಷೇಕ್ಸಪೀಯರ, ಪುಷಕಿನ್, ಗಾರ್ಕಿ, ಷಾ, ಇವರ ಗ್ರಂಥಗಳನ್ನು ಜರ್ಮನಿ ಲಕ್ಷಗಟ್ಟಲೆ ಸುಟ್ಟಿತು. ಜನತೆಯಲ್ಲಿ ಜಾತಿ, ರಕ್ತ, ಸಾಮ್ರಾಜ್ಯ ಮದವನ್ನು ತುಂಬಿ ಅವರನ್ನು ರಾಕ್ಷಸರನ್ನಾಗಿ ಮಾಡುವ ಸಾಹಿತ್ಯ ಪ್ರಗತಿ ಸಾಹಿತ್ಯವೆನ್ನುವ ಜನರ ವಿವೇಕವನ್ನು ನಾವು ಶಂಕಿಸಬೇಕಾಗುತ್ತದೆ. ಬ್ರಾಹ್ಮಣನನ್ನು ನಿಂದಿಸುವ ಜೈನ, ವೀರಶೈವ ಸಾಹಿತ್ಯ; ಜೈನನನ್ನು ಅಲ್ಲಗಳೆಯುವ ವೀರಶೈವ, ಬ್ರಾಹ್ಮಣ ಸಾಹಿತ್ಯ; ವೀರಶೈವನನ್ನು ತುಚ್ಛವಾಗಿ ಕಾಣುವ ಬ್ರಾಹ್ಮಣ, ಜೈನ ಸಾಹಿತ್ಯಗಳೂ ಪ್ರಗತಿಶೀಲವಾಗುತ್ತವೆ. ಆದರೆ ಇಂತಹ ಸಾಹಿತ್ಯ ನಮ್ಮ ಜನಜೀವನವನ್ನು ಯಾವ ಮಟ್ಟದಲ್ಲಿ ನಿಲ್ಲಿಸಿದೆ, ಎಂಬುದನ್ನು ವಿಚಾರವಂತರು ಪರಿಶೀಲಿಸಬೇಕು. ಸಮಾಜದ ಮೇಲೆ ಕಾಲಕಾಲಕ್ಕೆ ಕೂಡುವ ಧೂಳನ್ನು ನಿವಾರಿಸಿ ಅದರ ಶುಷ್ಕಜೀವನಕ್ಕೆ ಬದುಕನ್ನು ಯಾವದು ಧಾರೆಯೆರೆಯುವದೋ ಅದೇ ಪ್ರಗತಿಶೀಲ ಸಾಹಿತ್ಯ. ಉಳಿದುದು ಪ್ರತಿಗಾಮಿ ಸಾಹಿತ್ಯ.

ಪ್ರಗತಿಶೀಲ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಬೇಕಾದರೆ ಬಾಳಿನ ಸಮಗ್ರ ಅನುಭವವಿರಬೇಕು. ಪುಸ್ತಕ ಪಾಂಡಿತ್ಯದಿಂದಾಗಲಿ, ಸರ್ಕಾರಿ ಅಧಿಕಾರದಿಂದಾಗಲಿ, ಶ್ರೀಮಂತಿಕೆಯ ಸೊಕ್ಕಿನಿಂದಾಗಲ್ಲಿ ಅದು ಲಭಿಸತಕ್ಕುದಲ್ಲ. ಷೇಕ್ಸಪೀಯರ, ಷೆಲ್ಲಿ, ರಾಘವಾಂಕ, ನಾರಣಪ್ಪ ಬಾಳಿನ ಕಹಿಯನ್ನು ಚನ್ನಾಗಿ ಉಂಡವರು. ಆ ಅನುಭವದೊಂದಿಗೆ, ಪ್ರತಿಭೆ ಬೆರೆತು ಅಮರ ಕಾವ್ಯವಾಗಿವೆ. ಷೇಕ್ಸಪೀಯರನ ಪೃಥಕ್ಕರಣ, ಷೆಲ್ಲಿಯ ಉದ್ವೇಗ, ರಾಘವಾಂಕನ ವಿಚಾರವೈಭವ, ನಾರಣಪ್ಪನ ಆತ್ಮವಿಶ್ವಾಸ ಎಂದಿಗೂ

ಅಳಿಯುವ ಹಿರಿಯ ಗುಣಗಳು. ಅವರ ಜೀವನವೇ ಮಹಾಕಾವ್ಯ. ಅಂತೇ ಅವರ ಕೃತಿಗಳಲ್ಲಿ ಆ ಕೆಚ್ಚು, ಆ ಕಿಚ್ಚು, ಆ ಧೈರ್ಯ, ಆ ಸ್ಥೈರ್ಯ.

ಇಂತಹ ಕವಿಗಳು ನಮ್ಮಲ್ಲಿ ಇಂದು ಹುಟ್ಟಬೇಡವೇ? ಅವರ ದಿವ್ಯ ಕೃತಿಗಳಂಥಹ ಮಹಾಕಾವ್ಯಗಳು ಇಂದು ನಮ್ಮಲ್ಲಿ ಬರಬೇಡವೇ? ನವೋದಯ ಕಾಲದಲ್ಲಿ ಬಂದ ಸಾಹಿತಿಗಳು ರಾಷ್ಟ್ರದ ಆಸೆಯನ್ನು ಪೂರಯಿಸಿಲ್ಲ. ಏಮ್ಮುಖವಾದ ಅವರ ಬಾಳು, ಅನುಭವದ ಅಭಾವ, ಪುಸ್ತಕ ಪಾಂಡಿತ್ಯ, ಪ್ರತಿಷ್ಠೆ ನಮ್ಮನ್ನು ಘನಸಾಹಿತ್ಯದಿಂದ ವಂಚಿತರನ್ನಾಗಿ ಮಾಡಿವೆ. ನಾವಿಂದು ಆಸೆಯಿಂದ ನೋಡುವದು ಉದಯೋನ್ಮುಖರಾದ ತರುಣ ಸಾಹಿತಿಗಳನ್ನು. ಅವರಿಂದ ಈ ಆಸೆ ಪೂರಯಿಸುವದೇ?

ಪೂರಯಿಸಲೇಬೇಕು. ಸೋದರ ರಾಷ್ಟ್ರಗಳು, ಸೋದರ ಪ್ರಾಂತಗಳು ನಾಗಾಲೋಟದಲ್ಲಿ ಮುಂದುವರಿಯುತ್ತಿರುವಾಗ ಕನ್ನಡನಾಡು ಕುಂಟುತ್ತ ನಡೆಯುವುದು ಸಾಧ್ಯವಿಲ್ಲ. ಆದರೆ ಓಟಕ್ಕೆ ತಕ್ಕ ಕಸುವಿರಬೇಕು. ಸಹನೆ, ತಾಳ್ಮೆ, ಸ್ಥೈರ್ಯ, ಸೌಜನ್ಯಗಳಿರಬೇಕು.

ಸಾಹಿತ್ಯವನ್ನು ಒಂದು ತಪಸ್ಸೆಂದು ಭಾವಿಸಿ ತರುಣ ಸಾಹಿತಿಗಳು ತಮ್ಮ ಗುರಿಯನ್ನು ನಿರ್ದೇಶಿಸಿಕೊಳ್ಳಬೇಕು. ವಿಶಾಲ ಅನುಭವವನ್ನು ದೊರಕಿಸಿಕೊಳ್ಳುವದರ ಜತೆಗೆ ವಿಶಾಲ ಸಾಹಿತ್ಯಾವಲೋಕನವನ್ನೂ ಮಾಡಬೇಕು. ಹಲವು ದೇಶಗಳ ಸಾಹಿತ್ಯಗಳ ಬಗೆ, ಚೆಲುವು, ಓಜಸ್ಸುಗಳನ್ನು ಅರ್ಥಮಾಡಿಕೊಳ್ಳಬೇಕು. ಇದಕ್ಕೆ ಮೊದಲು ತಮ್ಮ ದೇಶದ ಪ್ರಾಚೀನ, ಅರ್ವಾಚೀನ ಸಾಹಿತ್ಯದ ಸಂಪೂರ್ಣ ಪರಿಜ್ಞಾನವನ್ನು ಪಡೆದುಕೊಳ್ಳಬೇಕು. ಈ ಎಲ್ಲ ಅಧ್ಯಯನದಿಂದ ಲೇಖಕನಿಗೆ ತನ್ನ ಇತಿಮಿತಿಯ ಅರಿವಾಗುತ್ತದೆ. ನಾನು ಅವರನ್ನು ಓದಿದ್ದೇನೆ, ಇವರನ್ನು ಓದಿದ್ದೇನೆ ಎಂದು ಲೇಖಕ ಸಾರಿಕೊಳ್ಳುವದಕ್ಕಿಂತ, ಆ ಓದು ಎಷ್ಟರ ಮಟ್ಟಿಗೆ ತನಗೆ ಕರಗತವಾಗಿದೆಯೆಂಬುದನ್ನು ವಿಚಾರಮಾಡಬೇಕು. ಅನುಭವ, ಅಭ್ಯಾಸಗಳೆರಡರ ಕೊರತೆಯನ್ನು ಅಹಂಕಾರದಲ್ಲಿ ತುಂಬ ಲೆಕ್ಕಿಸುವದು ವಿವೇಕಿಗಳಿಗೆ ತರವಲ್ಲ.

ಈಚೆಗೆ ನಾನು ನೋಡಿದ ಗ್ರಂಥಗಳಲ್ಲಿ ಈ ಕೊರತೆಗಳು ಎತ್ತಿ ಕಾಣುತ್ತಿವೆ. ಗ್ರಂಥಕರ್ತರ ಪರಿಶ್ರಮ ನೈಪುಣ್ಯಗಳಿಗಿಂತ ಅಹಂಕಾರ

ಎದ್ದು ಕಾಣುತ್ತಿದೆ. ನನ್ನ ಪುಸ್ತಕ ಜನಕ್ಕೆ ಮೆಚ್ಚಿಕೆಯಾಗುತ್ತದೋ ಇಲ್ಲವೋ ಎನ್ನುವ ಭೀತಿಯನ್ನು ಮುಚ್ಚಲು ಮಾಡಿರುವ ಈ ಪ್ರಯತ್ನ ಗ್ರಂಥದ ಯೋಗ್ಯತೆಯನ್ನು ಖಂಡಿತವಾಗಿ ಹೆಚ್ಚಿಸುವದಿಲ್ಲ. ಎಷ್ಟು ಜನ ದೇವಾಲಯಗಳ ಗೋಪುರಗಳ ಮೇಲೆ ನಿಂತು ಒಂದು ಒಳ್ಳೆಯ ಗ್ರಂಥ ವನ್ನು ನಿಂದಿಸಿದರೂ ಅದರ ಬೆಲೆ, ವರ್ಚಸ್ಸು ಕಡಿಮೆಯಾಗುವದಿಲ್ಲ; ಹಾಗೆಯೇ ಎಷ್ಟು ಜನ ಅದನ್ನು ಮಹಾಕಾವ್ಯವೆಂದು ತೋರಿಸಿಕೊಟ್ಟರೂ ಅವರಲ್ಲಿ ಯೋಗ್ಯತೆ ಇಲ್ಲದಿದ್ದರೆ ಅದು ಉಳಿಯುವದಿಲ್ಲ. ಲೇಖಕ ಓದುಗ ನನ್ನು ಮೂರ್ಖ ಎಂದು ಕರೆಯುವದಕ್ಕಿಂತ ತಾನು ಜಾಣನೇ ಎಂದು ವಿಚಾರಮಾಡುವದೊಳ್ಳೆಯದು.

ಅಹಂಕಾರದ ಅಂಕುರವಾಗುವದು ಅಲ್ಪತೃಪ್ತಿಯಿಂದ. ತಾನು ಬರೆದಿರುವದು ಮಹಾಕಾವ್ಯ, ಇದನ್ನು ಜನ ಮೆಚ್ಚಲೇಬೇಕು ಎಂದು ಹಟ ಹಿಡಿಯುವ ಯಾವ ಲೇಖಕನೂ ಮೂರನೆಯ ದರ್ಜೆಯನ್ನು ದಾಟಲಾರ. ಬ್ರೌನಿಂಗ್, ಶೆಲ್ಲಿ, ವರ್ಡ್ಸ್‌ವರ್ತರಂತಹ ಮಹಾಕವಿಗಳು ತಮ್ಮ ಪ್ರತಿಭೆ ಎಲ್ಲಿ ಬತ್ತಿಹೋಗುವದೋ ಎಂದು ಅಂಜುತ್ತಿದ್ದರಂತೆ. ಉತ್ತಮ ಲೇಖಕ ಯಾವನೂ ತನ್ನ ಕೃತಿಗಳಲ್ಲಿ ಪೂರ್ಣ ತೃಪ್ತಿಯನ್ನು ಪಡೆಯಲಾರ. ಮುಂದೆ ಹೋಗುತ್ತಿರುವ ಅವನ ಮನಸ್ಸು ಹಿಂದೆ ಆದುದರ ಬಗ್ಗೆ ಚಿರ ಅತೃಪ್ತಿಯನ್ನು ಪಡೆಯುತ್ತದೆ. ಇದಕ್ಕೂ ಉತ್ತಮವಾದುದನ್ನು ನಾನು ಬರೆಯಲಿಲ್ಲವಲ್ಲಾ ಎಂದವನು ಕೊರಗುತ್ತಲೇ ಇರುತ್ತಾನೆ. ಅವನ ಶ್ರೇಯಸ್ಸು, ಕಾವ್ಯಸಿದ್ಧಿ, ಆತ್ಮೋತ್ಕ್ರಾಂತಿಗಳಿಗೆಲ್ಲಾ ಈ ಅತೃಪ್ತಿಯೇ ಕಾರಣ. ಅಂತಹ ಅತೃಪ್ತಿ ನಮ್ಮ ತರುಣ ಲೇಖಕರಲ್ಲಿ ಹುಟ್ಟಬೇಕು. ಆ ದೈವಿಕ ಅತೃಪ್ತಿ ಅವರಲ್ಲಿರುವವರೆಗೆ ಪ್ರಗತಿ ಅವರ ಕೈಗೂಸು.

ಸಾಹಿತ್ಯದಲ್ಲಿ ವಿಚಾರ, ರಸಗಳೆರಡೂ ಹಾಸುಹೊಕ್ಕಾಗಿ ಕೂಡಿ ಕೊಂಡಿರಬೇಕು. ರಸವಿಲ್ಲದ ವಿಚಾರ ಅವಿಚಾರ, ವಿಚಾರವಿಲ್ಲದ ರಸ ನೀರಸ. ಕೆಲವರಿಗೆ ವಸ್ತುವಿರುತ್ತದೆ, ಹೇಳುವ ರೀತಿ ಗೊತ್ತಿಲ್ಲ; ಕೆಲವ ರಿಗೆ ಹೇಳುವ ರೀತಿ ಗೊತ್ತು ಆದರೆ ವಸ್ತುವಿಲ್ಲ. ಈ ಕೊರತೆಯನ್ನು ಹೋಗಲಾಡಿಸಿಕೊಳ್ಳಬೇಕಾದರೆ ಲೇಖಕ ಆತ್ಮಶೋಧಕನಾಗಬೇಕು, ಸತ್ಯ ಸಾಧಕನಾಗಬೇಕು. ತನ್ನದಾಗಿ ಹೇಳುವದೇನಿದೆ? ತನ್ನ ರೀತಿಯಲ್ಲಿ

ಸುಭಗತೆ ಮೂಡಿದೆಯೇ? ತನ್ನ ಕೃತಿ ತನಗೇ ನಿರ್ಮಲ ತೃಪ್ತಿಯನ್ನಿತ್ತು ಮತ್ತೆ ಮತ್ತೆ ಓದಬೇಕೆಂದು ಪ್ರೇರೇಪಿಸುತ್ತದೆಯೇ ಎಂಬುದನ್ನು ವಿಚಾರ ಮಾಡಬೇಕು. ಯಾವ ಕೃತಿ ಹತ್ತುಸಲ ಓದಿದರೂ ಬರೆದವನಿಗೆ ಬೇಸರ ವನ್ನುಂಟುಮಾಡುವದಿಲ್ಲವೋ ಅಂತಹದನ್ನು ಇತರರು ಒಂದುಸಲವಾದರೂ ಓದಿ ಸಂತೋಷಪಡಲು ಸಾಧ್ಯವಾಗುತ್ತದೆ.

ಹಿಂದಿನವರು ಕವಿಯನ್ನು ಋಷಿಗೆ ಹೋಲಿಸಿದ್ದಾರೆ. ಋಷಿ ಸತ್ತವ ರನ್ನು ಬದುಕಿಸಬಲ್ಲ, ಅಜ್ಞರನ್ನು ಪ್ರಾಜ್ಞರನ್ನಾಗಿ ಮಾಡಬಲ್ಲ, ಅಗೋಚರ ವಾದುದನ್ನು ಗೋಚರಿಸುವಂತೆ ಮಾಡಬಲ್ಲ. ಕವಿಯೂ ಹಾಗೆಯೇ. ಸ್ತುತಿಯಿಂದ, ಶಿಷ್ಯಕೋಟಿಯಿಂದ, ನೀಳವಾದ ಗಡ್ಡದಿಂದ ಯಾವನೂ ಋಷಿಯಾಗಲಾರ. ಹಾಗೆಯೇ ಮುನ್ನುಡಿಗಳಿಂದ, ಆತ್ಮಸ್ತುತಿಯಿಂದ ಉದ್ಧನೆಯ ಕ್ರಾಪಿನಿಂದ ಯಾವನೂ ಕವಿಯಾಗಲಾರ. ಕಾವ್ಯಸೃಷ್ಟಿ ವಿರಾಮುವೇತನಿಗೆ, ವಿಲಾಸಿಗೆ, ವಿಹಾರಿಗೆ ದಕ್ಕುವ ವಸ್ತುವಲ್ಲ—ಅದಕ್ಕೆ ಬೇಕು ಸತತ ಧ್ಯಾನ, ಧ್ಯಾಸ, ತ್ಯಾಗ, ಆತ್ಮಾರ್ಪಣೆ. ಒಬ್ಬ ಮಹಾಕವಿ ಹೇಳಿದ್ದಾನೆ 'ಶಾರದಾಮಂದಿರಕ್ಕೆ ಬರಲು ಎಲ್ಲರಿಗೂ ಆಹ್ವಾನ—ಆದರೆ ಕೆಲವರಿಗೆ ಮಾತ್ರ ಸ್ಥಾನ.' ಆ ಸ್ಥಾನವನ್ನು ದೊರಕಿಸಿಕೊಳ್ಳುವ ಪ್ರಯತ್ನ ನಮ್ಮ ತರುಣ ಲೇಖಕರು ಮಾಡಲಿ. ಬರೆದುದನ್ನು ಅಚ್ಚುಮಾಡುವದರ ಕಡೆಗೆ ಅವರ ಲಕ್ಷ್ಯ ಬೇಡ. ಬರೆದುದು ಉಳಿಯುವದರ ಕಡೆಗಿರಲಿ ಅವರ ಗುರಿ ಗಮ್ಯ.

ಪ್ರಗತಿ, ಆಕ್ಟೋಬರ್ ೪೫.

---

# ಕ. ಸಾ. ಸ. ಅಧ್ಯಕ್ಷ ಭಾಷಣ (೧೯೩೮)

ಶ್ರೀ ದಿವಾಕರ ರಂಗರಾಯರು ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಹೇಳಿದ ಅನೇಕ ಮಾತುಗಳು ಗಮನಾರ್ಹವಾದು ವಾಗಿವೆ. ಸಾಹಿತ್ಯ ಪರಿಷತ್ತಿಗೆ ಹೊಸ ದೃಷ್ಟಿಕೋನವನ್ನು ಕಲ್ಪಿಸಿ ಜೀವನಕ್ಕೂ ಸಾಹಿತ್ಯಕ್ಕೂ ಇರುವ ನಿಕಟ ಸಂಬಂಧವನ್ನು ಶ್ರೀಯುತರು ನಿರ್ದೇಶಿಸಿದ್ದಾರೆ.

"ಒಮ್ಮೆ ಸಾಹಿತ್ಯವು ಕೇವಲ ಹಲವರ ವಿಷಯವಾಗಿತ್ತು. ಆಗ ಅದು ಬಹಳವಾಗಿ ಸಿರಿವಂತರನ್ನು ಅವಲಂಬಿಸಿತ್ತು. ಅವರು ಉಪಕಾರ ಬುದ್ಧಿಯಿಂದ ಸಾಹಿತ್ಯವನ್ನು ಪೋಷಿಸುತ್ತಿದ್ದರು. ತಮ್ಮ ಗೌರವಾಭಿವೃದ್ಧಿಗೆಂದು ಕವಿಗಳನ್ನು ತಮ್ಮ ಆಶ್ರಯಕ್ಕಿಟ್ಟುಕೊಳ್ಳುತ್ತಿದ್ದರು............ಈಗ ಯಾವ ಲಕ್ಷ್ಮೀಪುತ್ರನು ಏನು ಕೊಟ್ಟನು ಎಂಬುದಕ್ಕಿಂತ ಜನಸಾಮಾನ್ಯರು ಯಾವ ಪುಸ್ತಕವನ್ನು ಎಷ್ಟು ಕೊಂಡರು ಮತ್ತು ಓದಿದರು ಎಂಬುದನ್ನು ತಿಳಿದುಕೊಳ್ಳುವುದು ಹೆಚ್ಚು ಮಹತ್ವದ್ದಾಗಿದೆ."

ಕರ್ನಾಟಕದಲ್ಲಿ ಇಂದು ಈ ಪರಿಸ್ಥಿತಿಯು ಬರದಿದ್ದರೂ ಬರುವ ಸುಚಿನ್ಹಗಳು ತೋರುತ್ತಿವೆ. ಕನ್ನಡ ಪುಸ್ತಕಗಳನ್ನು ಕೊಳ್ಳುವವರಿಲ್ಲದಿದ್ದರೂ ಓದುವವರಿಗೆ ಕೊರತೆಯಿಲ್ಲ. ಫ್ರಾನ್ಸ್ ಅಮೇರಿಕಾಗಳಲ್ಲಿರುವಂತೆ ಸಾಹಿತ್ಯ ಜನಪದದ ಕೈಗೆ ಯಾವಾಗ ಸೇರುತ್ತದೆಯೋ ಜನಪದವು ಯಾವಾಗ ಸಾಹಿತ್ಯ ಪೋಷಣೆಯ ಕರ್ತವ್ಯವನ್ನು ಹೊರಲನುವಾಗುತ್ತದೆಯೋ ಅಗ ನಮ್ಮ ಸಾಹಿತ್ಯದ 'ಉದಯರಾಗ' ಮೂಡುತ್ತದೆ.

ನುಡಿಯು ವಿಚಾರ ದೀರ್ಘವಾಗಿ ಚರ್ಚಿಸುತ್ತ ಶ್ರೀಯುತರು "ಬುದ್ಧಿಯ ವಿಕಾಸಕ್ಕೆ ಭಾಷೆಯೇ ಮುಖ್ಯ ಆಧಾರ, ಭಾವವ್ಯಕ್ತಿಗೆ ಭಾಷೆಯೇ ಮುಖ್ಯ ಸಾಧನ" ಎಂಬ ತತ್ವವನ್ನು ಪ್ರತಿಪಾದಿಸಿದ್ದಾರೆ.

"ಮನುಷ್ಯನ ಪ್ರಗತಿಗೆ ಭಾಷೆಯಂಥ ಸಾಧನವು ಇನ್ನೊಂದು ಆವುದೂ ಇಲ್ಲ. ಭಾಷೆ ಬೆಳೆಯದೆಹೋಗಿದ್ದರೆ ಮನುಷ್ಯನ ವಿಕಾಸವೇ ಆಗುತ್ತಿರಲಿಲ್ಲ ಎಂದು ಒಬ್ಬ ದೊಡ್ಡ ಪಂಡಿತನು ಹೇಳಿರುವನು. ಮನುಷ್ಯನ ಮಿದುಳಿನ ವಿಕಾಸವು, ಅವನ ಭಾವನೆಗಳ ಬೆಳವಣಿಗೆಯು ಆಯಾ ನುಡಿಯ ಬೆಳವಣಿಗೆಯನ್ನೇ ಅವಲಂಬಿಸಿದೆ. ನುಡಿ ಅಥವಾ ಭಾಷೆ ಇಲ್ಲದೆ ವಿಚಾರ ಮಾಡಿರಿ ಎಂದು ನಮಗೆ ಹೇಳಿದರೆ ನಮ್ಮ ಗತಿಯೇನು? ಅದೇ ರೀತಿ ಭಾಷೆಯ ಸಹಾಯವಿಲ್ಲದೆ ಅಥವಾ ನಮಗೆ ಬರದಿರುವ ಭಾಷೆಯಿಂದ ನಮ್ಮ ವಿಚಾರ ಹಾಗು ಭಾವಗಳನ್ನು ವ್ಯಕ್ತಪಡಿಸಬೇಕು ಎಂದು ಯಾರಾದರೂ ಹೇಳಿದರೆ, ಕಾಲಿಲ್ಲದೆ ನಡೆಯಿರಿ, ಕಣ್ಣಿಲ್ಲದೆ ನೋಡಿರಿ ಎಂದು ಹೇಳಿದಷ್ಟೆ ಅದು ಹಾಸ್ಯಾಸ್ಪದವಾಗುವದು. ಇದಲ್ಲದೆ ಭಾಷೆಯೆಂಬುದು ಮೇಲಂಗಿಯಂತೆ ಬೇಕಾದಾಗ ಹಾಕಿ ಬೇಕಾದಾಗ ತೆಗೆದೊಗೆಯಲು ಬರುತ್ತಿದ್ದರೆ

ಅಥವಾ ಬೇಕಾದ ವಿಧದ ಅಂಗಿಗಳನ್ನು ಕೊಂಡುಕೊಳ್ಳಲು ಬರುವಂತೆ ವಿವಿಧ ಭಾಷೆಗಳನ್ನು ಬೇಕಾದ ಹಾಗೆ ಪೇಟೆಯಲ್ಲಿ ಕೊಂಡು ಉಪಯೋಗಿಸಲು ಬರುವಂತಿದ್ದರೆ ಭಾಷೆಗೆ ಮಹತ್ವ ಕೊಡುವ ಕಾರಣವಿದ್ದಿಲ್ಲ. ಭಾಷೆಯ ಸ್ಥಿತಿಯು ಹಾಗಿಲ್ಲ. ನಮ್ಮ ಭಾಷೆಯೆಂಬುದು ನಮ್ಮ ಮೈದೊಗಲಿನಂತೆ ನಮ್ಮ ಶರೀರದೊಡನೆಯೇ ಬೆಳೆದಿದೆ. ಅದನ್ನು ಸಿಕ್ಕಹಾಗೆ ಅದಲುಬದಲು ಮಾಡಲು ಬರುವಂತಿಲ್ಲ. ಅದರ ಮೇಲೆ ಇನ್ನೊಂದು ಅಥವಾ ಅನೇಕ ಅಂಗಿಗಳನ್ನು ಹಾಕಿಕೊಳ್ಳಬಹುದು. ಆದರೆ ಮೂಲ ಮೈಯೊಂದು ಇದ್ದೇ ಇರುವದು. ಹಾಗೆ ನಮ್ಮ ನುಡಿಯೆಂಬುದೊಂದು ಇದ್ದೇ ಇರುವದು. ಅದನ್ನುಪಯೋಗಿಸಿದಂತೆ ನಾವು ಇನ್ನಿತರ ಯಾವ ಭಾಷೆಗಳನ್ನೂ ಉಪಯೋಗಿಸಲಾರೆವು."

ಹಿಂದೂಸ್ಥಾನಕ್ಕೆಲ್ಲಾ ಏಕತ್ರವಾದ ಒಂದು ಭಾಷೆ ಸಾಕು; ಪ್ರಾಂತಿಕ ಭಾಷೆಗಳು ಹೋಗಬೇಕು ಎಂದು ವಾದಿಸುವವರಿಗೆ ಇದಕ್ಕಿಂತಲೂ ಯೋಗ್ಯ ಉತ್ತರ ಬೇಕಿಲ್ಲ. ಯಾವದು ದೇಶಭಾಷೆಯೋ ಯಾವದು ಮಾತೃ ಭಾಷೆಯೋ ಅದೇ ಜನಪದಕ್ಕೆ ಬೆಳಕನ್ನು ನೀಡುವದೆಂದು ಶ್ರೀಯುತರು ಸ್ಪಷ್ಟವಾಗಿ ತಿಳಿಸಿದ್ದಾರೆ.

"ಆಯಾ ಪ್ರಾಂತದಲ್ಲಿ ಆಯಾ ಭಾಷೆಗೇ ಮುಖ್ಯ ಸ್ಥಾನವು ಇರಬೇಕು. ಶಾಲೆ ಕಾಲೇಜುಗಳ ಭಾಷೆ, ಕೋರ್ಟು ಕಚೇರಿಗಳ ಭಾಷೆ, ಕಾಗದ ಪತ್ರಗಳ ಭಾಷೆ, ಸಾರ್ವಜನಿಕ ವ್ಯಾಖ್ಯಾನ ಉಪನ್ಯಾಸಗಳ ಭಾಷೆ ಇವು ಪ್ರಾಂತಿಕವೇ ಇರತಕ್ಕದ್ದು ವಾಸ್ತವಿಕ. ಆಯಾ ಪ್ರಾಂತದಲ್ಲಿಯ ಸಾರ್ವಜನಿಕ ಹಣವು ಇತರ ಯಾವದೇ ಭಾಷೆಯ ಅಭಿವೃದ್ಧಿಗಾಗಿ ವೆಚ್ಚವಾಗುವದು ಯೋಗ್ಯವಲ್ಲ."

ಇಂಗ್ಲೀಷಿನ ವಿಚಾರ ಪ್ರಸ್ತಾಪಿಸುತ್ತಾ 'ಇಂಗ್ಲಿಷ್ ಕಲಿಯದಿದ್ದರೆ ನಮ್ಮ ರಾಷ್ಟ್ರವು ಸುಧಾರಿಸುತ್ತಿರಲಿಲ್ಲ. ಈ ಹೊಸ ಕಲ್ಪನೆಗಳು ನಮಗೆ ಬರುತ್ತಿರಲಿಲ್ಲ ಎಂಬ ಮಾತಿನಲ್ಲಿ ನನ್ನ ವಿಶ್ವಾಸವಿಲ್ಲ. ಸ್ವಾತಂತ್ರ್ಯಾದಿ ಕಲ್ಪನೆಗಳು ಈಗಿನ ಯುಗಲಕ್ಷಣಗಳಾಗಿವೆ' ಎಂದು ಶ್ರೀಯುತರು ಹೇಳಿದ್ದಾರೆ.

ಈ ವಿಧವಾದ ಸ್ವಾತಂತ್ರ್ಯಯುಗ ಲಕ್ಷಣಗಳು ಪುಲಕೇಶಿ, ಶಿವಾಜಿ,

ಟೀಪುಯವರ ಕಾಲದಲ್ಲಿಯೂ ತಲೆದೋರಿದವು. ಆದರೂ ನಮ್ಮ ದೇಶ ಪಾರತಂತ್ರ್ಯದ ಮಡಲಿನಲ್ಲಿ ಬೀಳಬೇಕಾಯಿತು. ಸ್ವಾತಂತ್ರ್ಯ ಕಲ್ಪನೆಗಳನ್ನು ನಮ್ಮ ಮನಸ್ಸಿನಲ್ಲಿ ಬಿತ್ತುವುದಕ್ಕೆ ಲಾರ್ಡ್ ಮೆಕಾಲೆ ಮೊದಲಾದವರು ಇಂಗ್ಲಿಷಿನ ಶಿಕ್ಷಣವನ್ನು ಪ್ರಸಾರಮಾಡಲಿಲ್ಲ; ಅದರ ಪರಿಣಾಮ ಅವರ ಮನಸ್ಸಿಗೆ ವಿರುದ್ಧವಾಯಿತು. ದಾದಾಭಾಯ್ ನವರೋಜಿ, ಗೋಖಲೆ, ತಿಲಕ್, ಗಾಂಧಿ ಇವರೆಲ್ಲಾ ಇಂಗ್ಲಿಷ್ ಶಿಕ್ಷಣ, ಸಂಸ್ಕೃತಿ, ಸಂಪರ್ಕಗಳಿಂದ ಹುರಿಗೊಂಡು ದೇಶದ ಪಾರತಂತ್ರ್ಯ ಬಂಧನವನ್ನು ಕಳಚುವುದಕ್ಕೆ ತೊಡಗಿದರು. ಇವತ್ತಿನ ಕನ್ನಡ ಸಾಹಿತ್ಯ (ಭಾರತದ ಪ್ರತಿಯೊಂದು ಪ್ರಾಂತ್ಯದ ಸಾಹಿತ್ಯವೂ) ರೂಪುಗೊಳ್ಳುವುದಕ್ಕೆ ಇಂಗ್ಲೀಷೇ ಕಾರಣ. ರಾಜಕೀಯ ದೃಷ್ಟಿಯಿಂದ ಇಂಗ್ಲೀಷರನ್ನು ನೋಡುವ ರೀತಿ ಬೇರೆ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ದೃಷ್ಟಿಯಿಂದ ಅವರನ್ನು ನಾವು ಬೇರೆ ರೀತಿಯಲ್ಲಿಯೇ ನೋಡಬೇಕಾಗುತ್ತದೆ.

ಸಾಹಿತಿಗಳ ಕರ್ತವ್ಯ, ದೃಷ್ಟಿಗಳನ್ನು ಕುರಿತು ಶ್ರೀಯುತರು ಚಿನ್ನದಂತಹ ಮಾತುಗಳನ್ನಾಡಿದ್ದಾರೆ.

“ನಮ್ಮ ಸಾಹಿತ್ಯವು ಉತ್ತಮವಾಗಬೇಕಾದರೆ ನಮ್ಮ ಜೀವನವು ಉತ್ತಮವಿರಬೇಕು. ಹೇಡಿಗಳೆಂದೂ ವೀರರಸವನ್ನು ಬಣ್ಣಿಸಲಾರರು, ಅಥವಾ ರುಕ್ಷಹೃದಯದವರು ನವರಸವನ್ನೆಂದೂ ಸ್ವಾದಿಸಲಾರರು. ಸಾಹಿತ್ಯವು ನಮ್ಮ ಜೀವನದ ಪ್ರತಿಬಿಂಬವು. ನಮ್ಮ ಜೀವನದ ಮೇಲೆ ಬರೆದ ಟೀಕೆ ಟಿಪ್ಪಣಿಯು, ನಮ್ಮ ಜೀವನವನ್ನು ಹಿಂಡಿ ತೆಗೆದ ತನಿರಸವು, ನಮ್ಮ ಜೀವನದ ದರ್ಶನವು, ನಮ್ಮ ಜೀವನದ ರಸಾಯನವು, ನಮ್ಮ ಜೀವನದ ಸಂಜೀವನವು ಎಂದು ಬೇರೆಬೇರೆಯವರು ಬೇರೆ ಬೇರೆ ರೀತಿ ಹೇಳಿರುವದುಂಟು. ಈ ಎಲ್ಲ ವ್ಯಾಖ್ಯೆಗಳು ತಕ್ಕಮಟ್ಟಿಗೆ ಸರಿಯೇ ಎಂದು ಭಾವಿಸಬಹುದು. ಇವೆಲ್ಲವುಗಳ ಮೇಲಿಂದ ಗೊತ್ತಾಗುವದೇನೆಂದರೆ, ಸಾಹಿತ್ಯದ ಝರಿಯು ಜೀವನದಲ್ಲಿ ಉಗಮಹೊಂದುವದು. ಆದುದರಿಂದ ಆ ಉಗಮಸ್ಥಾನವನ್ನು ನಾವು ಎಷ್ಟು ಪರಿಶುದ್ಧವಾಗಿಯೂ, ತೇಜಸ್ವಿಯಾಗಿಯೂ, ರಸವತ್ತಾಗಿಯೂ ಇಡುವೆವೊ ಅಷ್ಟು ನಮ್ಮ ಸಾಹಿತ್ಯವು ಶ್ರೇಷ್ಠವಾಗುವದು. ಸಾಹಿತಿಯು ಪ್ರಗಮನಶೀಲನು, ವಿಶಾಲಹೃದಯದವನು, ಸ್ವತಂತ್ರವೃತ್ತಿ

ಯುವನು, ನಿರ್ಭಯನು, ಸತ್ಯವ್ರತನು ಇದ್ದರೆ ಮಾತ್ರ ಅವನ ವಾಗ್ಝರಿಯು ಓಜಸ್ವಿಯಾಗಿ ತನ್ನ ಪ್ರಭಾವವನ್ನು ಬೀರುವದು."

ರಕ್ತ, ಕ್ರಾಂತಿ, ಪ್ರಳಯ, ದಬ್ಬಾಳಿಕೆಗಳ ಮೇಲೆ ನೂರಾರು ಒಣ ಕವಿತೆಗಳನ್ನು ಬರೆಯುವ ಕವಿಗಳು ಜೀವನದಲ್ಲಿ ಒಂದು ಸಮಸ್ಯೆಯಿದ್ದಾಗ ಹೇಗೆ ವರ್ತಿಸುವರೆಂಬುದನ್ನು ಗಮನಿಸಬೇಕು. ಬೈರನ್, ಷೆಲ್ಲಿ ಕವಿಗಳು ತಮ್ಮ ತತ್ವಕ್ಕಾಗಿ ಮಾತೃಭೂಮಿಯನ್ನು ಕೂಡ ತೊರೆದರು. ನಮ್ಮ ಕೆಲವು ಸಾಹಿತಿಗಳು ಸರ್ಕಾರದ ಕ್ಷಮೆ ಬೇಡಿ ಪೆರೋಲ್ ತಪ್ಪಿಸಿಕೊಂಡಿದ್ದಾರೆ. ನುಡಿ, ನಡೆಗಳು ಒಂದಾಗುವವರೆಗೆ ಸಾಹಿತಿಗಳಲ್ಲಿ ಆತ್ಮಾರ್ಪಣ ಬುದ್ಧಿ ಹುಟ್ಟುವವರೆಗೆ ಯಾವ ಸಾಹಿತ್ಯಕ್ಕೂ ಹಿರಿಮೆ ಬರಲಾರದು. ಕ್ರಾಂತಿ, ರಕ್ತ ಕವಿತೆಗಳು ಒಣ 'ಬುಡುಬುಡಿಕೆ'ಯಾಗುವುದರಲ್ಲಿ ಸಂದೇಹವಿಲ್ಲ.

ಶ್ರೀಯುತರು ಕನ್ನಡಿಗರ ಮುಂದೆ ನಿಷ್ಕೃಷ್ಟವಾದ ಕಾರ್ಯಕ್ರಮವನ್ನಿಟ್ಟಿದ್ದಾರೆ. ಅದನ್ನು ಅನುಸರಿಸಿ ಕಾರ್ಯೋನ್ಮುಖರಾಗುವುದರಲ್ಲಿ ಕನ್ನಡಿಗರ ಕಾರ್ಯದಕ್ಷತೆ ವ್ಯಕ್ತಪಡುತ್ತದೆ.

೧. ಕರ್ನಾಟಕ ಸಾಹಿತ್ಯ ಪರಿಷತ್ತಿನ ಜನ, ಧನಬಲವನ್ನು ಹೆಚ್ಚಿಸುವುದು.

೨. ಕರ್ನಾಟಕದಲ್ಲಿ ನಿರಕ್ಷರತೆಯನ್ನು ಪರಿಹರಿಸುವುದು.

೩. ಮೈಸೂರು ವಿಶ್ವವಿದ್ಯಾನಿಲಯವು ಕರ್ನಾಟಕ ವಿಶ್ವವಿದ್ಯಾನಿಲಯವಾಗುವಂತೆ ಪ್ರಯತ್ನಿಸುವುದು.

೪. ಗಡಿನಾಡುಗಳಲ್ಲಿರುವ ಕನ್ನಡದ ಸಮಸ್ಯೆಗಳನ್ನು ಪರಿಹರಿಸುವುದು.

ಕನ್ನಡಿಗರಿಗೆ ಕೆಲಸದ ಹೆದ್ದಾರಿಯನ್ನು ತೋರಿಸಿಕೊಟ್ಟ ಕರ್ಮಯೋಗಿ ಶ್ರೀ ದಿವಾಕರರವರಿಗೆ ನಾವು ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಕನ್ನಡ ನುಡಿ ೧೩-೧-೪೯

---

*

# ೨೧. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಭಾಷಣ (೧೯೪೪)

ರಬಕವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ೨೮ ನೆಯ ಅಧಿವೇಶನಕ್ಕೆ ಪ್ರೊ. ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳರವರು ಅಧ್ಯಕ್ಷರಾಗಿ ಆಯ್ಕೆಯಾದುದು ಕನ್ನಡ ನಾಡಿಗೇ ಸಂತೋಷವನ್ನುಂಟುಮಾಡಿತು. ಶ್ರೀ ಬಸವನಾಳರು ಕನ್ನಡ ನಾಡು ನುಡಿಗಳ ಸೇವೆಯಲ್ಲಿ ತಮ್ಮ ಜೀವಮಾನವನ್ನೇ ಸವೆಸಿರುವ ಮಹನೀಯರು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ, ಲಿಂಗಾಯತ ಶಿಕ್ಷಣ ಸಮಿತಿಗಳ ಆಧಾರಸ್ತಂಭರಲ್ಲಿ ಒಬ್ಬರಾದ ಇವರು ಹಲವು ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಬೆಳಗಾಂವಿಯ ಲಿಂಗರಾಜ ಕಾಲೇಜಿನಲ್ಲಿ ಪ್ರೊಫೆಸರರಾಗಿ, ಮುಂಬಯಿ ಸೆನೆಟ್ ಸಮಿತಿಯ ಸದಸ್ಯರಾಗಿ ಶಿಕ್ಷಣಪ್ರಪಂಚದಲ್ಲಿ ನುರಿತವರಾಗಿದ್ದಾರೆ. ಸಹಕಾರ ಸಂಘಗಳು, ಬ್ಯಾಂಕುಗಳ ಡೈರೆಕ್ಟರರಾಗಿದ್ದುಕೊಂಡು ಆರ್ಥಿಕ ಪ್ರಪಂಚವನ್ನೂ ಬಲ್ಲವರಾಗಿದ್ದಾರೆ. ಉತ್ತರ ಕರ್ನಾಟಕದ ಎಲ್ಲ ಸಾಂಸ್ಕೃತಿಕ ಚಲನವಲನಗಳಲ್ಲಿಯೂ ಪ್ರೊ. ಬಸವನಾಳರವರು ಆಸಕ್ತಿ ವಹಿಸಿ ತಮ್ಮ ಸೇವೆಯನ್ನು ಅರ್ಪಿಸುತ್ತ ಬಂದಿದ್ದಾರೆ. ಜೀವನದ ಸರ್ವತೋಮುಖವಾದ ಪರಿಚಯವನ್ನು ಪಡೆದು, ಅವುಗಳನ್ನು ಸಾಹಿತ್ಯದಲ್ಲಿ ರೂಢಿಸಿ ಕಾಲುಶತಮಾನ ಅವಿಶ್ರಾಂತವಾಗಿ ಕನ್ನಡ ನಾಡಿನ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡಿದ್ದಾರೆ. ಸರಳ ಜೀವನ, ನಿರ್ಮತ್ಸರ ಬುದ್ಧಿ ವಿಶಾಲಹೃದಯಗಳಿಂದ ಪ್ರೊ. ಬಸವನಾಳರವರು ಕನ್ನಡಿಗರೆಲ್ಲರ ಪ್ರೇಮ ಗೌರವಗಳಿಗೆ ಪಾತ್ರರಾಗಿದ್ದಾರೆ. ಇವರ ದುಡಿಮೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಹೆಚ್ಚುಹೆಚ್ಚಿನ ಉಪಯುಕ್ತತೆಯನ್ನು ಗಳಿಸಿ ಎಲ್ಲ ಕನ್ನಡಿಗರ ಕಣ್ಮಣಿಯಾಗಲೆಂದು ನಾವು ಹಾರೈಸುತ್ತೇವೆ.

ಸಮ್ಮೇಳನಾಧ್ಯಕ್ಷರು ತಮ್ಮ ವಿಚಾರಪೂರ್ಣ ಭಾಷಣದಲ್ಲಿ ಸಾಹಿತ್ಯ ಹೇಗೆ ಮುಂದುವರಿಯಬೇಕೆಂಬುದರ ಬಗ್ಗೆ ಉಪಯುಕ್ತ ಸಲಹೆ, ಸೂಚನೆಗಳನ್ನಿತ್ತಿದ್ದಾರೆ. ಸಾಹಿತ್ಯವನ್ನು ನಾಡಹಿತ, ನಾಡಸಂರಕ್ಷಣೆಗಳಿಂದ ಬೇರೆ ಮಾಡಲಾಗುವುದಿಲ್ಲವೆಂಬ ಪ್ರಸ್ತಾನದಿಂದ ಆರಂಭಿಸಿ ಸಮಯೋಚಿತವಾದ

ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಇಂದು ಕರ್ನಾಟಕದಲ್ಲಿ ಬೃಹದಾಕಾರ ತಳೆದು ನಿಂತಿರುವ ಗಡಿನಾಡಿನ ಸಮಸ್ಯೆಗಳು, ಒಳನಾಡಿನ ಸಮಸ್ಯೆಗಳು ಕನ್ನಡಿಗರ ಎಲ್ಲ ಬಗೆಯ ಹಿತವನ್ನು ಸಂಬಂಧಿಸಿದ ಮಾತುಗಳಿಗಾಗುವ ಅಡಚಣೆಯನ್ನು ಗಮನಿಸಿದರೆ ಅಧ್ಯಕ್ಷರ ಮಾತಿನ ಅಸ್ಖಲಿತ ಸತ್ಯದರಿವಾಗುತ್ತದೆ.

ಪರಿಷತ್ತು ಮಾಡಬೇಕಾದ ಕೆಲಸಕಾರ್ಯಗಳನ್ನು ಚರ್ಚಿಸುತ್ತಾ "ಕಾಗದದಲ್ಲಿಯೇ ಉಳಿಯಬಹುದಾದ ಗೊತ್ತುವಳಿಗಳಿಂದಾಗಲಿ, ಪ್ರಕಟನೆಯ ಕ್ಷೇತ್ರವನ್ನು ದಾಂಟದಿರುವ ಧ್ಯೇಯಗಳಿಂದಾಗಲಿ ಪರಿಷತ್ತಿನ (ಅಥವಾ ಸಮ್ಮೇಳನದ) ಬೆಲೆಯನ್ನು ಯಾರೂ ಅಳೆಯುವುದಿಲ್ಲ; ಆದರೆ ಕಣ್ಣಿಗೆ ಕಾಣುವಂತೆ, ಅಳತೆಗೆ ತೂಕಕ್ಕೆ ಎಣಿಕೆಗೆ ಅಳವಡುವಂತೆ, ಗೈದ ಕಾರ್ಯದಿಂದಲೆ ಅಳೆಯುವರೆಂಬುದನ್ನು ನೆನಪಿನಲ್ಲಿಡತಕ್ಕುದು."

ಪರಿಷತ್ತು ಮಾಡಬೇಕೆಂದು ಅಧ್ಯಕ್ಷರು ಸೂಚಿಸಿರುವ ಕೆಲಸ ಕಾರ್ಯಗಳನ್ನು ಪರಿಷತ್ತು 'ಅಳತೆಗೆ ತೂಕಕ್ಕೆ ಎಣಿಕೆಗೆ ಅಳವಡುವಂತೆ' ಮಾಡಬೇಕಾದರೆ ಎಲ್ಲ ಕನ್ನಡಿಗರ ನೆರವು ಅದಕ್ಕೆ ಅಗತ್ಯ. ವೈಯಕ್ತಿಕವಾಗಿ ಅಥವಾ ಧ್ಯೇಯರೂಪವಾಗಿ ಬೇಕಾದ ಭಿನ್ನಾಭಿಪ್ರಾಯವಿದ್ದರೂ ಕನ್ನಡ ಜನ ಪರಿಷತ್ತಿನ ಬಳಿಗೆ ಬಂದು, ಸಂಸ್ಥೆಯನ್ನು ಬಲಪಡಿಸಿ, ತಮ್ಮ ವಿಚಾರ, ಅನುಭವ ಪಾಂಡಿತ್ಯಗಳಿಗನುಗುಣವಾದ ಕಾರ್ಯವನ್ನು ಪರಿಷತ್ತು ಮಾಡುವಂತೆ ನೆರವಾಗಬೇಕು. ಪರಿಷತ್ತೆಂದರೆ ಯಾರೋ ನಾಲ್ವರ ಸಂಸ್ಥೆಯೆಂಬ ಭಾವನೆ ಹೋಗಿ ಎಲ್ಲ ಕನ್ನಡಿಗರಿಗೂ ಅದರ ರಕ್ಷಣೆ, ಬೆಳವಳಿಗೆಯಲ್ಲಿ ಸಮಾನಾಧಿಕಾರವಿದೆಯೆಂಬ ಭಾವನೆ ಮೂಡಬೇಕು. ಜನತೆಯಲ್ಲಿ ಪರಿಷತ್ತು ನಮ್ಮದು ಎಂಬ ಭಾವನೆ ಬೆಳೆದು ಬಲಿತ ಹೊರತೂ ಹೆಚ್ಚಿನ ಕೆಲಸಗಳನ್ನು ಪರಿಷತ್ತಿನ ಕಡೆಯಿಂದ ನಿರೀಕ್ಷಿಸುವುದು ಸತ್ಯದ ಆಭಾಸವಾದೀತು. ಪರಿಷತ್ತಿನ ಅಭಿಮಾನಿಗಳು ಕನ್ನಡ ಜನತೆಯ ಹೃದಯ ಮಂದಿರದ ಬಳಿಗೆ ಪರಿಷತ್ತನ್ನೊಯ್ದು ಅವರ ಪ್ರೇಮ, ಸಹಾಯ, ಸಹಕಾರಗಳನ್ನು ಪರಿಷತ್ತಿಗೆ ಒದಗಿಸಿ ಕೊಡಬೇಕು.

ಸಾಹಿತ್ಯರಂಗದಲ್ಲಿ ಪರಿಷತ್ತು ಮಾಡಬೇಕಾದ ಕಾರ್ಯಗಳನ್ನು ನಿಯೋಜಿಸುತ್ತಾ ಅಧ್ಯಕ್ಷರು

"...........ಭಾಷೆ ಮತ್ತು ಸಾಹಿತ್ಯಗಳ ಆಳವಾದ ಪರಿಚಯ, ಕೂಲಂಕಷವಾದ ತಿಳಿವಳಿಕೆ, ಸಹೃದಯಾತ್ಮಕ ವಿಮರ್ಶೆ—ಇವುಗಳೂ ನಮಗೆ ಹೆಚ್ಚು ಬೇಕಾಗಿವೆ."

"...........ಇನ್ನೂ ಹೆಸರು ಸಹ ಕೇಳದ ಹಳೆಯ ಗ್ರಂಥಗಳು ಬೇಕಾದಷ್ಟು ಇರುವುವೆಂದು ಈಗ ದೊರೆತ ಅಲ್ಪ ಪರಿಚಯದಿಂದಲೇ ಗೊತ್ತಾಗುವಂತಿದೆ. ಅಂಥಹ ಗ್ರಂಥಗಳನ್ನು ಹೊರಗೆ ತೆಗೆದು ಶುದ್ಧಪ್ರತಿ ಮಾಡಿಸುವುದೂ, ಸಾಧ್ಯವಾದಂತೆ ಒಮ್ಮೆಯಾದರೂ ಮುದ್ರಣ ಕಂಡು ಬಯಲಿಗೆ ಬೀಳುವಂತೆ ಯೋಜನೆ ಮಾಡುವುದೂ ಆವಶ್ಯಕ. ಕೆಲವರು ಹಳೆಯದನ್ನೆ ಹೇಳುವ, ಹೇಳುವುದರಲ್ಲಿಯೂ ವೈವಿಧ್ಯವಿಲ್ಲದೆ ಹೇಳಿದುದನ್ನೆ ಹೇಳುವ ಗತಕಾಲೀನ ಸಾಹಿತ್ಯವನ್ನು ಪ್ರಕಟಿಸುವುದು ವ್ಯಥಾಯಾಸ, ನಿರರ್ಥಕ ವ್ಯಯವೆಂದು ಹೇಳಬಹುದು. ಆದರೆ ಬರಿಯ ಸಾಹಿತ್ಯ ದೃಷ್ಟಿಯಿಂದಲ್ಲದೆ, ಚರಿತ್ರೆ ಸಂಸ್ಕೃತಿ ಮುಂತಾದ ಇತರ ದೃಷ್ಟಿಯಿಂದಲೂ ಇವುಗಳ ಉಪಯೋಗ ಬಹಳವಾಗುವಂತಿದೆ. ಅಂತೆಯೇ ಕನ್ನಡ ಜನತೆಯ ಕಣ್ಣೆದುರಿಗೆ ಒಮ್ಮೆಯಾದರೂ ಅವು ಬೀಳುವುದು ಅವಶ್ಯವೆನಿಸುತ್ತದೆ" ಎಂದು ಹೇಳಿರುವುದು ಸುತರಾಂ ಒಪ್ಪತಕ್ಕದ್ದಾಗಿದೆ. ಪರಿಷತ್ತು ಅವಶ್ಯಕವಾಗಿ ಕೈಗೊಳ್ಳಬೇಕಾದ ಕಾರ್ಯಗಳಲ್ಲಿ ಪ್ರಾಚೀನ ಗ್ರಂಥಗಳ ಸಂಗ್ರಹ, ಪರಿಷ್ಕರಣ, ಪ್ರಕಟನೆಗಳೂ ಸೇರಿವೆ. ಆದರೆ ಪರಿಷತ್ತಿನ ಆರ್ಥಿಕ ಸ್ಥಿತಿ ಹಾಗೂ ಸಾಕಷ್ಟು ತಜ್ಞ ಕೆಲಸಗಾರರ ಅಭಾವಗಳಿಂದ ಈ ಕೆಲಸ ಹಿಂದು ಬಿದ್ದಿದೆ. ಉದಾರಹೃದಯರೂ ಕೊಡುಗೈಯೊಡೆಯರೂ ಆದ ಕನ್ನಡಿಗರು ಧಾರಾಳವಾದ ನಿಧಿಗಳನ್ನು ಪರಿಷತ್ತಿಗೆ ಕೊಟ್ಟು ಈ ರಂಗದಲ್ಲಿ ಪರಿಷತ್ತು ಹೆಚ್ಚು ಕೆಲಸಮಾಡಲು ನೆರವಾಗಬೇಕು. ಪ್ರಾಚೀನ ಸಾಹಿತ್ಯ ಯಾವದೇ ಇರಲಿ ಅಧ್ಯಕ್ಷರು ಹೇಳಿರುವಂತೆ ಒಮ್ಮೆಯಾದರೂ ಅಚ್ಚಾಗಿ ಎಲ್ಲರ ಕೈ ಸೇರಬೇಕು. ಎಲ್ಲಾ ಕಡೆಯ ಕನ್ನಡ ಭಕ್ತರು ತಮ್ಮತಮ್ಮಲ್ಲಿ ದೊರೆಯುವ ಹಸ್ತಪ್ರತಿಗಳನ್ನು ಪರಿಷತ್ತಿಗೆ ಕಳುಹಿಸಿಕೊಟ್ಟರೆ ದೊಡ್ಡ ಜ್ಞಾನ ನಿಧಿಯನ್ನು ನಾವು ಕಾಪಾಡಿದಂತಾಗುತ್ತದೆ.

ಸಂಶೋಧನೆಗೆ ಸಂಬಂಧಪಟ್ಟಂತೆ ಅಧ್ಯಕ್ಷರು ಒಂದು ಎಚ್ಚರಿಕೆಯ ಮಾತನಾಡಿದ್ದಾರೆ

"ಸಂಶೋಧನದ ನೆಪದಲ್ಲಿ ಅತಿ ಪಕ್ಕದ ಜನರು ಹುರುಳಿಲ್ಲದ ವಾದ ವಿವಾದಗಳನ್ನೆಬ್ಬಿಸಿ, ಇಲ್ಲದ ಸಮಸ್ಯೆಗಳನ್ನು ಹುಟ್ಟಿಸಿ ಮತಮತಗಳಲ್ಲಿ ವಿರಸವನ್ನು ಹುಟ್ಟಿಸುವಂತಹ—ಇವು ಬುದ್ಧ್ಯಾಪೂರ್ವಕವೆಂದು ಯಾವಾಗಲೂ ಹೇಳಲಾಗುವುದಿಲ್ಲವಾದರೂ—ಅಪಪ್ರಚಾರಗಳು ಅಲ್ಲಲ್ಲಿ ಕಂಡು ಬರುತ್ತವೆ. ಇಂತಹ ಪ್ರವೃತ್ತಿ-ಪ್ರಯತ್ನಗಳಿಗೆ ಅದಷ್ಟು ತೀವ್ರ ತಡೆ ಹಾಕುವುದವಶ್ಯಕ."

ಬೇರೊಂದು ಜಾತಿ, ಪಂಗಡ, ಮತದ ಮೇಲೆ ಮಾಡುವ ಇಲ್ಲಸಲ್ಲದ ಟೀಕೆಯೇ ಸಂಶೋಧನೆಯೆಂಬ ಹೆಸರಿನಲ್ಲಿ ಪ್ರಸಾರವಾಗುತ್ತಿದೆ. ಇಂತಹ ಸಂಶೋಧನೆ ನಿಂತುಹೋದರೂ ಕನ್ನಡ ನಾಡಿಗೆ ಏನೂ ನಷ್ಟವಿಲ್ಲ. ವಿದ್ಯೆಯ ಹೆಸರಿನಲ್ಲಿ ಸಮಾಜವನ್ನು ದೇಶವನ್ನು ಒಡೆದು ಛಿದ್ರಛಿದ್ರ ಮಾಡುವ ಮನೋವೃತ್ತಿ ಹೋಗಬೇಕಾದರೆ ಪರಿಷತ್ತು ಅಧಿಕೃತ ರೀತಿಯಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಳ್ಳಬೇಕು ಮತ್ತು ವಿದ್ವನ್ಮಂಡಲಿಯಲ್ಲಿ ಸರಿಯಾದ ಮನೋವೃತ್ತಿ ಮೂಡಲು ತಕ್ಕ ಪ್ರಸಾರಕಾರ್ಯವನ್ನು ಕೈಗೊಳ್ಳಬೇಕು. ದ್ವೇಷಾಸೂಯೆಗಳನ್ನೂ, ಒಳಜಗಳವನ್ನೂ ಬಿತ್ತುವಂತಹ ಸಂಶೋಧಕ ಕೃತಿ ಹೊರಬಿದ್ದರೆ ಅದನ್ನು ಅಧಿಕಾರವಾಣಿಯಿಂದ ಪರಿಷತ್ತು ಖಂಡಿಸಬೇಕು.

ಆಧುನಿಕ ಸಾಹಿತ್ಯದಲ್ಲಾಗಿರುವ ಪ್ರಗತಿಯನ್ನು ನಿರ್ದೇಶಿಸುತ್ತಾ ಮಾನ್ಯ ಅಧ್ಯಕ್ಷರು

"ಈಗ ಒಟ್ಟಿನಲ್ಲಿ ಸಂಖ್ಯೆ ಹಾಗೂ ಗಾತ್ರದಲ್ಲಿ ಅಲ್ಲದಿದ್ದರೂ ಸಾಹಿತ್ಯಿಕ ಬೆಲೆಯಲ್ಲಿಯೂ ಇನ್ನಿತರ ಎಲ್ಲ ರೀತಿಗಳಲ್ಲಿಯೂ ಕನ್ನಡದಲ್ಲಿ ಉಂಟಾಗಿರುವ ಆಧುನಿಕ ಸಾಹಿತ್ಯ ನೆರೆಯ ಯಾವ ಸಾಹಿತ್ಯಕ್ಕೂ ಕಡಿಮೆಯಾದುದಲ್ಲವೆಂದು ಹೆಮ್ಮೆಯಿಂದ ಹೇಳಬಹುದು. ಆದರೆ ಇಷ್ಟಕ್ಕೆ ಸಮಾಧಾನ ಪಡುವಹಾಗಿಲ್ಲ. ಕಾರ್ಯವಾಗಿದೆ—ಆದರೂ ಆದ ಕಾರ್ಯ ಅಲ್ಪ; ಆಗಬೇಕಾದುದು ಅಪಾರ."

ಈ ಮಾತನ್ನು ಆಧುನಿಕ ಸಾಹಿತಿಗಳು ಮತ್ತೆ ಮತ್ತೆ ವಿಚಾರಮಾಡಬೇಕು. ನಾವು ನೀಡುತ್ತಿರುವ ಸಾಹಿತ್ಯ ನಾಡಿಗೆ ಬೇಕಾದ ಸಾಹಿತ್ಯವಾಗಿದೆಯೇ—ಇದರಿಂದ ನಾಡಿನಲ್ಲಿ ಹೊಸ ಚೈತನ್ಯ, ಹೊಸ ರಕ್ತ ಹುಟ್ಟು

ತ್ತಿದೆಯೇ—ಹೊಸ ಬೆಳಕು ಮೂಡುತ್ತಿದೆಯೇ ಎಂದು ಯೋಚಿಸಬೇಕು. ನಮ್ಮ ನಾಡಿನ ಜನತೆಯಲ್ಲಿ ಹರಡಿರುವ ಅಸೀಮ ಅಜ್ಞಾನಕ್ಕೆ ಸಾಹಿತಿಗಳು ರಚಿಸಬೇಕಾದ ಅಂಜನ ಯಾವುದೆಂದರಸಬೇಕು. ಸಾಹಿತಿಗೆ ತೃಪ್ತಿ ಯೆಂಬುದು ಸಾಧ್ಯವೇ ಇಲ್ಲ. ಉತ್ಕ್ರಾಂತವಾಗುವ ಮನಸ್ಸು ಹೊಸ ವಿಚಾರಗಳನ್ನು ಗ್ರಹಿಸುತ್ತದೆ, ಹಳೆಯದಕ್ಕೆ ಪುಟ ಕೊಡುತ್ತದೆ. ಈ ಎರಡು ಶ್ವೇತಾಶ್ವಗಳನ್ನು ಹೂಡಿದ ಬೃಹದ್ರಥದ ಸಾರಥಿ ಸಾಹಿತಿ. ನಾಡಿನ ಸಾಹಿತಿಯಿಂದ ಉತ್ತಮ ಕೃತಿ ಬರಬೇಕಾದರೆ ಅವನು ಸಾಹಿತ್ಯದೀಕ್ಷೆ ವಹಿಸಬೇಕಾಗುತ್ತದೆ. ಪ್ರತಿಫಲ, ಸುಖಶಾಂತಿಗಳಿಂದ ವಿವರ್ಜಿತವಾದ ಸಾಹಿತ್ಯರಂಗಕ್ಕೆ ಅವನು ಮೀಸಲಾಗಬೇಕು. ಈ ದಾರ್ಢ್ಯ, ನಿಷ್ಠೆಗಳ ಜತೆಗೆ ತೆರೆದ ಕಣ್ಣು, ತೆರೆದ ಹೃದಯ ಅವನದಾಗಿರಬೇಕು. ನೆರೆಪ್ರಾಂತ್ಯ ಗಳ ಸಾಹಿತ್ಯಕ್ಕೆ ನಮ್ಮದು ಕಡಿಮೆಯಿಲ್ಲ ಎನ್ನುವ ಹೆಮ್ಮೆಯಂತಿರಲಿ— ಜಗತ್ತಿನ ಯಾವ ಸಾಹಿತ್ಯಕ್ಕೂ ನಮ್ಮದು ಕಡಿಮೆಯಿಲ್ಲ ಎನ್ನುವ ಹೆಮ್ಮೆ ಕೆಚ್ಚು ನಮ್ಮಲ್ಲಿ ಏತಕ್ಕೆ ಬೆಳೆಯಬಾರದು? ಅಂತಹ ಸಾಹಿತ್ಯವನ್ನು ನಾವೇಕೆ ನಿರ್ಮಿಸಬಾರದು?

ಸಾಹಿತಿಯ ಮನೋಭೂಮಿಕೆಯ ನಿರ್ಮಾಣಕ್ಕೆ ವಿಶಾಲದೃಷ್ಟಿ ಬಹಳ ಆವಶ್ಯಕವಾದ ವಸ್ತು. ಇದನ್ನು ಹೇಗೆ ಬೆಳಸಿಕೊಳ್ಳಬಹುದೆಂದು ವಿಚಾರ ಮಾಡುತ್ತಾ ಅಧ್ಯಕ್ಷರು

"ಲೇಖಕರು ಸಾಹಿತಿಗಳೇ ಮೊದಲಾದವರು ವೈಯಕ್ತಿಕವಾಗಲಿ, ಸಂಘಗಳ ಮುಖಾಂತರವಾಗಲಿ ಭರತಖಂಡದ ಇತರ ಪ್ರಾಂತಗಳ ಸಾಹಿತಿ ಗಳೊಡನೆ ಪರಿಚಯ-ಸಂಬಂಧಗಳನ್ನು ಬೆಳಸಿಕೊಳ್ಳಬೇಕು. ಅಖಿಲ ಭಾರತೀಯ ಸಂಸ್ಥೆಗಳಾದ ಪಿ. ಇ. ಎನ್. (P. E. N.) ಸಂಸ್ಥೆ ಹಾಗೂ ಪ್ರಗತಿಶೀಲ ಲೇಖಕರ ಸಂಘ (Progressive Writers' Association) ಇವುಗಳೊಡನೆ ಸಹಕಾರ-ಸಂಬಂಧಗಳನ್ನು ಇಟ್ಟುಕೊಳ್ಳುವುದರಿಂದ ಕನ್ನಡದ ಬರಹಗಾರರಿಗೆ ಒಳ್ಳೆಯ ಬೆಂಬಲ ದೊರೆತು ಅವರ ಗೌರವ ಸ್ವಾತಂತ್ರ್ಯಗಳನ್ನು ಕಾಪಾಡುವಲ್ಲಿ ಲಾಭಕರವಾಗುವುದೆನ್ನಲು ಸಂದೇಹ ವಿಲ್ಲ" ಎಂದು ಹೇಳಿದ್ದಾರೆ.

ಸಾಹಿತ್ಯ ಪ್ರೇಮದಿಂದ, ಪೋಷಣೆಯಿಂದ ಬೆಳೆಯಬೇಕು. ಅದಕ್ಕೆ ಸತತ ಪ್ರೋತ್ಸಾಹ, ಆಶ್ರಯ ಬೇಕು. ಅಧ್ಯಕ್ಷರು

"ನೂತನ ಸಾಹಿತ್ಯವನ್ನು ಪ್ರೋತ್ಸಾಹಿಸುವ, ಹಿರಿಯ ಸಾಹಿತ್ಯಿಗರನ್ನು ಅವರ ಕಾರ್ಯಕ್ಕಾಗಿ ಸನ್ಮಾನಿಸುವ ಉದ್ದೇಶದಿಂದ ಬೆಲೆಯುಳ್ಳ ಪಾರಿತೋಷಕಗಳನ್ನೂ ಪದಕಗಳನ್ನೂ ಕೊಡುವ ಸ್ಥಿರ ಯೋಜನೆಯನ್ನು ಮಾಡುವುದು ವಿಹಿತವು...........ಇದಲ್ಲದೆ ಕನ್ನಡ ಸಾಹಿತ್ಯಕ್ಕೆ ಹಲವು ರೀತಿಯಿಂದ ಸೇವೆ ಸಲ್ಲಿಸಿದ ಪ್ರತಿಷ್ಠಿತ ಮಹನೀಯರನ್ನು ಸಮ್ಮೇಳನದ ಕಾಲಕ್ಕೆ ಬರಮಾಡಿಕೊಂಡು ಸಾರ್ವಜನಿಕವಾಗಿ ಮರ್ಯಾದೆಯನ್ನು ಮಾಡುವ ಕಾರ್ಯಕ್ರಮವನ್ನು ಇಟ್ಟುಕೊಳ್ಳುವುದು ಹಿತಕರವೆಂದು ನನಗೆ ತೋರುತ್ತತೆ."

ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಬಗ್ಗೆ ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಸಮ್ಮೇಳನಗಳನ್ನು ಕೂಡಿಸತಕ್ಕ ಮಹನೀಯರು ಆಲೋಚಿಸಿ ಕಾರ್ಯ ಕೈಗೊಳ್ಳಬೇಕು. ಪ್ರೊ. ಬಸವನಾಳರವರ ಅಧ್ಯಕ್ಷ ಭಾಷಣ ಅವರ ಆಳವಾದ ಪಾಂಡಿತ್ಯ, ವಿಶಾಲವಾದ ಅನುಭವಗಳ ಪ್ರತೀಕವಾಗಿ ಕನ್ನಡ ಸಾಹಿತಿಗಳಿಗೆ, ಭಕ್ತರಿಗೆ, ಅಭಿಮಾನಿಗಳಿಗೆ ಹಲವು ಹೆದ್ದಾರಿಗಳನ್ನು ತೋರಿಸುವಂತಹುದಾಗಿದೆ.

---

## ೨೨. ಸಾಹಿತಿಗಳಿಗೆ ಎಚ್ಚರ

'ಯುನೈಟೆಡ್ ಕರ್ನಾಟಕ' ಪತ್ರಿಕೆಯ ಸಂಪಾದಕರು ತಮ್ಮ ಪತ್ರಿಕೆಯ (೫-೨-೧೯೩೯) ಪ್ರಧಾನ ಲೇಖನವೊಂದರಲ್ಲಿ ಕರ್ನಾಟಕದ ಪ್ರಾಂತ್ಯ ಪ್ರಶ್ನೆಯ ಬಗ್ಗೆ ಸಾಹಿತಿಗಳು ತಾಳಬೇಕಾದ ನೀತಿಯನ್ನು ಸೂಚಿಸಿದ್ದಾರೆ.

"Private institutions like the Karnataka Sanghas and enthusiastic lovers of Karnataka in the various divisions should bear the burden of the work lying ahead. The former,

we are of opinion should for a while lay side their literary or other activities and take up the urgent work in connection with unification.

ಎಂದು ಸಕಾಲ ಸೂಚನೆಯನ್ನಿತ್ತಿದ್ದಾರೆ. ನೃಪತುಂಗನ ಕನ್ನಡ ನಾಡು ಮತ್ತು ನಾಡವರ ಸ್ತುತಿ, ಪಂಪನ ಕನ್ನಡ ನಾಡ ವರ್ಣನೆ, ಚಿಕ್ಕುಪಾಧ್ಯಾಯನ ಕನ್ನಡದೇಶ ಪ್ರೇಮಗಳನ್ನು ಬಣ್ಣಿಸುತ್ತ ಕುಳಿತರೆ ಸಾಲದು. ಇಂದು ಕನ್ನಡ ರಾಜ್ಯವು ಸ್ಥಾಪಿತವಾಗಬೇಕಾಗಿದೆ. ಕನ್ನಡ ಸಾಹಿತಿಗಳು ಆ ಕಡೆಗೆ ಹೆಚ್ಚು ಲಕ್ಷ್ಯ ಕೊಡಬೇಕು. ಮೊನ್ನೆ ನಡೆದ ಸ್ಪೇನಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಾಲ್ಫ್ ಫಾಕ್ಸ್, ಸ್ಟೀಫನ್ ಸ್ಪೆಂಡರ್ ಮೊದಲಾದ ಅನೇಕ ಸಾಹಿತಿಗಳು ಪ್ರಧಾನ ಪಾತ್ರ ವಹಿಸಿದರು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾತ್ರವಹಿಸಿದ ದಿವಂಗತ ಗಣೇಶ ಶಂಕರ ವಿದ್ಯಾರ್ಥಿ, ಅಬುಲ್ ಕಲಾಂ ಅಜಾದ್, ಚಕ್ರವರ್ತಿ ರಾಜಗೋಪಾಲಾಚಾರ್ಯ, ಕೆ. ಎಂ. ಮುನಿಷಿ ಮೊದಲಾದ ಮಹನೀಯರು ಪ್ರಸಿದ್ಧ ಸಾಹಿತಿಗಳು. ಜನಜೀವನಕ್ಕೆ ಸಮೀಪವಾದ ರಾಜಕೀಯ, ಸಾಹಿತ್ಯ ರಂಗಗಳಲ್ಲಿನ ಅನುಯಾಯಿಗಳಲ್ಲಿ ಹೆಚ್ಚಿನ ಮೈತ್ರಿ ಬೆಳೆಯಬೇಕು. ಕರ್ನಾಟಕದಲ್ಲಂತೂ ಎರಡೂ ಎರಡು ಲೋಕಗಳಾಗಿವೆ. ಈ ಪರಿಸ್ಥಿತಿಯು ಬೇಗ ಹೋಗಬೇಕಾದುದು ಕನ್ನಡ ನಾಡಿನ ಹಿತದ ದೃಷ್ಟಿಯಲ್ಲಿ ಅತ್ಯವಶ್ಯಕ.

ಕನ್ನಡ ನುಡಿ. ೧೦-೨-೪೯

---

## ೨೩. ಕನ್ನಡ ಗ್ರಂಥ ಪ್ರಚಾರ

ಯಾವ ದೇಶದ ಸಾಹಿತ್ಯವೇ ಆಗಲಿ ತಲೆಯೆತ್ತಿಕೊಂಡು ಬಾಳಬೇಕಾದರೆ ಆ ದೇಶದ ಜನ ಸಾಕಷ್ಟು ಕಲಿತವರೂ, ಅರಿತವರೂ ಆಗಿರಬೇಕು. ತಮ್ಮ ದೇಶ, ಸಾಹಿತ್ಯ, ಕಲೆಗಳನ್ನವರು ಪ್ರೀತಿಸುವವರಾಗಿರಬೇಕು. ತಮ್ಮ ದೇಶದಲ್ಲಿ ಹುಟ್ಟುವ ವರಸಾಹಿತಿಯನ್ನು ಗೌರವಿಸುವವರಾಗಿರಬೇಕು; ಜನಸಾಮಾನ್ಯದಲ್ಲಿ ತಿಳಿವು ಸಮಂತುಗಳನ್ನು ಬೀರುವ

ಬದುಕಿನ ಕಡೆಗೆ ಸಾಹಿತಿಗಳು ಲಕ್ಷ್ಯ ಕೊಡುವವರಾಗಿರಬೇಕು. ಇದು ಜೀವಂತ ಜನಾಂಗ, ಸಾಹಿತ್ಯಗಳ ಸತ್ವವನ್ನು ಒರೆಹಚ್ಚುವ ಕಸೋಟಿ.

ಇದನ್ನು ಇಂದಿನ ಕನ್ನಡ ಸಾಹಿತ್ಯಕ್ಕೆ ಅನ್ವಯಿಸಿ ನೋಡೋಣ. ಈ ಹದಿನೈದು ವರ್ಷಗಳಲ್ಲಿ ಕನ್ನಡದಲ್ಲಿ ಅಪಾರ ಸಾಹಿತ್ಯರಾಶಿ ಸೃಷ್ಟಿಯಾಗಿದೆ. ನಾಟಕ, ಕಥೆ, ಕಾದಂಬರಿ, ಜೀವನಚರಿತ್ರೆ, ವಿಚಾರಸಾಹಿತ್ಯ, ವಿಜ್ಞಾನ, ಕಲೆ ಮೊದಲಾದ ವಿಷಯಗಳ ಮೇಲೆ ಗ್ರಂಥಗಳು ಹುಟ್ಟಿವೆ. ಕಾಲದ ಮಾನದಂಡದ ತೀಕ್ಷ್ಣ ಪರೀಕ್ಷೆಯನ್ನೂ ನೆರೆಪ್ರಾಂತಗಳ ತುಲನೆಯನ್ನು ತಡೆದು ತಲೆಯೆತ್ತಬಲ್ಲ ಯೋಗ್ಯತೆಯನ್ನೂ ಪಡೆದಿರುವ ಅನೇಕ ಗ್ರಂಥಗಳು ಹುಟ್ಟಿವೆ. ಕನ್ನಡಿಗರು ಇತರ ಪ್ರಾಂತದವರಿಗೆ ತಲೆತಗ್ಗಿಸುವುದು ಹಾಗಿರಲಿ, ಮಾರ್ಗದರ್ಶಿಗಳಾಗುವ ಸುಯೋಗ ಒದಗಿದೆ. ಆದರೆ ಆ ಗ್ರಂಥಗಳ ಗತಿ ಏನು, ಪ್ರಸಾರ ಎಷ್ಟಾಗಿದೆ, ಅವುಗಳನ್ನು ಬರೆದ ಗ್ರಂಥಕರ್ತರ ಪಾಡೇನು ? ಎಂದು ಸ್ವಲ್ಪ ಯೋಚಿಸಬೇಕಾಗಿದೆ.

ಪ್ರಚಂಡ ಪ್ರವಾಹದಂತೆ ಬಂದ ನವೋದಯದ ಹೊಳೆಯಲ್ಲಿ ಕನ್ನಡ ಸಾಹಿತಿಗಳು ತಮ್ಮ ಜೀವನದ 'ಕಾಗದದ ದೋಣಿಗಳನ್ನೂ' ತೇಲಿಬಿಟ್ಟರು. ಅನ್ನ ಬಿಟ್ಟು ನಿದ್ದೆಗೆಟ್ಟು ಗ್ರಂಥಗಳನ್ನು ಬರೆದರು. ಸಾಲ ಸೋಲ ಮಾಡಿ ಗ್ರಂಥಗಳನ್ನು ಅಚ್ಚುಹಾಕಿಸಿದರು. ನೋಟ, ಊಟ, ಅಲಂಕಾರಗಳಿಲ್ಲದರಿಂದಲೂ ವಂಚಿತರಾಗಿ ಮುದ್ರಾರಾಕ್ಷಸನಿಗೆ ತಮ್ಮ ಬಾಯ ತುತ್ತನ್ನು ನೀಡಿದರು. ಇದ್ದುದನ್ನು ಕಳೆದುಕೊಂಡು ಬರಿಗೈ ಮಾಡಿಕೊಂಡು ಕನ್ನಡ ಸಾಹಿತ್ಯಕ್ಕೆ ಏನೋ ಅಲ್ಪಸ್ವಲ್ಪ ಸೇವೆಮಾಡಿದೆವೆಂಬ ತೃಪ್ತಿಯೊಂದರಿಂದ ತೃಪ್ತರಾದರು. ಅವರು ಬರೆದು, ಓದುಗರಿಗೆ ಅರ್ಪಿಸಿದ ಗ್ರಂಥಗಳನ್ನು ಓದುವವರಿಲ್ಲ. ಕೊಂಡು ಓದುವವರ ಮಾತು ಹಾಗಿರಲಿ, 'ಕಾಣಿಕೆ'ಯಾಗಿ ಸಲ್ಲಿಸಲ್ಪಟ್ಟ ಗ್ರಂಥಗಳನ್ನು ಕೂಡ ಓದುವವರಿಲ್ಲ. ಕನ್ನಡದಲ್ಲಿ ಸಾಹಿತ್ಯವನ್ನು ಸೃಷ್ಟಿಸಬಹುದೆಂಬ ಕಲ್ಪನೆಯೇ ಕೆಲವರಿಗೆ ಹಾಸ್ಯಾಸ್ಪದ. ಷೇಕ್ಸ್‌ಪಿಯರ್, ಮಿಲ್ಟನ್, ಸ್ಕಾಟ್ ಮೊದಲಾದ ಕವಿಗಳ ತಾಯಿಹಾಲಿನ ಮೇಲೆ ಬೆಳೆದ ನಮ್ಮ ಜನಾಂಗಕ್ಕೆ ಪಂಪ, ರನ್ನ, ಜನ್ನ, ಹರಿಹರ, ರಾಘವಾಂಕರ ನೆನಪು ಹೇಗೆ ಬರಬೇಕು ? ಹಿಂದಿನ ಕವಿಗಳ ಗ್ರಂಥಗಳು ಪ್ರಕಾಶಕ್ಕೆ ಬರದೆ ಗೆದ್ದಲು, ಒಲೆಗಳ ಪಾಲಾದಂತೆ ಇಂದಿನ ಸಾಹಿತಿಗಳ

ಗ್ರಂಥಗಳು (ಕೆಲವು ಅಚ್ಚಾಗಿದ್ದರೂ) ಹುಳುಹುಪ್ಪಟೆಗಳ ಪಾಲಾಗುತ್ತಿವೆ. ಜತೆಗೆ ಪ್ರತಿಯೊಬ್ಬ ಸಾಹಿತಿಯೂ ಅಟ್ಲಾಸ್ ರಾಕ್ಷಸ ಭೂಮಿ ಹೊತ್ತಂತೆ ಸಾಲದ ಹೊರೆಯನ್ನೂ, ಮಾರಾಟವಾಗದೆ ಉಳಿದಿರುವ ಪುಸ್ತಕಗಳ ಹೊರೆಯನ್ನೂ ಹೊರಲಾರದೆ ಹೊರುತ್ತಿದ್ದಾನೆ.

ಒಂದುಸಲಕ್ಕೆ ೧೦೦೦ ಪ್ರತಿಗಳನ್ನು ಅಚ್ಚುಮಾಡಿಸುವುದು ಪದ್ಧತಿಯಾಗಿದೆ. ಗ್ರಂಥ ಕತೆಯೋ ಕಾದಂಬರಿಯೋ ನಾಟಕವೋ ಆಗಿದ್ದರೆ ೩-೪ ವರ್ಷಗಳಲ್ಲಿ ಸುಮಾರು ೧೫೦-೨೦೦ ಪ್ರತಿಗಳು ಮಾರಾಟವಾಗಬಹುದು. ಕಲೆ, ವಿಜ್ಞಾನವಾದರೆ ೩-೪ ವರ್ಷಗಳಲ್ಲಿ ೨೫-೫೦ ಪ್ರತಿಗಳು ಮಾರಾಟವಾಗಬಹುದು. ಶಾಸ್ತ್ರೋಕ್ತವಾಗಿ ಬರೆದ ಲೈಂಗಿಕ ವಿಜ್ಞಾನವಾದರೆ ೧೦೦-೭೦೦ ಪ್ರತಿಗಳು ಮಾರಾಟವಾಗಬಹುದು. ಹೊಲಸು ಅಭಿರುಚಿಗೆ ಸೊಪ್ಪುಹಾಕುವಂತೆ ಬರೆದ ದಾಂಪತ್ಯ ರಹಸ್ಯವಾದರೆ ೧೦೦೦ ಪ್ರತಿಗಳೂ ಆರುತಿಂಗಳಲ್ಲಿ ಮುಗಿಯಬಹುದು. ಈ ಸುಖ ವಾತಾವರಣದಲ್ಲಿ ನಮ್ಮ ಸಾಹಿತ್ಯ ಬೆಳೆಯುತ್ತಿದೆ.

ಕನ್ನಡ ಗ್ರಂಥಗಳಿಗಿರುವ ಭಾಗ್ಯದ ಬಾಗಿಲೆಂದರೆ ಪಠ್ಯ ಪುಸ್ತಕ ಸಮಿತಿ. ಗ್ರಂಥ ಯಾವುದಾದರೂ ತರಗತಿಗೆ ಪಠ್ಯಪುಸ್ತಕವಾಗಿ ನಿಯಾಮಕವಾದರೆ ಅಚ್ಚಾದ ಪ್ರತಿಗಳು ತೀರಬಹುದು. ಆದರೆ ಈ ಭಾಗ್ಯ ಎಷ್ಟು ಗ್ರಂಥಗಳಿಗೆ ಸಿಕ್ಕಬಹುದು ?

ಹಾಗಾದರೆ ಕನ್ನಡಿಗರಿಗೆ ಓದುವ ಅಭಿರುಚಿಯಿಲ್ಲವೆ ? ಈ ಪ್ರಶ್ನೆ ಕೇಳುವವರು ಬಸ್ ಸ್ಟ್ಯಾಂಡುಗಳ ಬಳಿ ಮಾರಾಟವಾಗುವ ಪುಸ್ತಕಗಳನ್ನೂ ರೈಲ್ವೆಯಲ್ಲಿ ಮಾರಾಟವಾಗುವ ಪುಸ್ತಕಗಳನ್ನೂ ಗಮನಿಸಬೇಕು. ಅಲ್ಲಿ ಮಾರಾಟವಾಗುವುದು ಸಾಮಾನ್ಯವಾಗಿ ಬಹು ಕೀಳುದರ್ಜೆಯ ಪುಸ್ತಕಗಳು; ಆದರೂ ಅವಕ್ಕೆ ಗತಿಯಿದೆ. ಅಕ್ಷರಜ್ಞರಾದ ಸಾಧಾರಣ ಜನ (ಪಾಮರರೆನ್ನಿಸಿಕೊಂಡಿರುವವರು) ಓದುವುದು ಅದೇ ಸಾಹಿತ್ಯವನ್ನು. ಎಲ್ಲ ರೀತಿಯಲ್ಲಿಯೂ ಉತ್ತಮವೂ ಪರಿಶುದ್ಧವೂ ಆದ ಆಧುನಿಕ ಸಾಹಿತ್ಯ ಅವರಿಗೆ ಬೇಡ.

ಇದಕ್ಕೆ ಕಾರಣಗಳು ಕೆಲವಿವೆ :

೧. ಬಸ್ ಸ್ಟ್ಯಾಂಡಿನ ಸಾಹಿತ್ಯ ಪ್ರಕಾಶಕರು ಅವುಗಳನ್ನು ಮಾರು

ವುದು ಬೆಲೆ ನೋಡಿಯಲ್ಲ: ಮಣಗಟ್ಟಲೆ ತೂಗಿ. ಒಂದುಮಣ ಬತ್ತೀಸ ಪುತ್ಥಳಿ ಕಥೆಗೆ ಆರು ರೂಪಾಯಿಯಾಗಬಹುದು. ಮಣಕ್ಕೆ ೧೮೦ ಪುಸ್ತಕ ಬರುತ್ತದೆ. ಒಂದೊಂದು ಪುಸ್ತಕಕ್ಕೆ ಸುಮಾರು ಮುಕ್ಕಾಲು ಆಣೆ ಬೀಳುತ್ತದೆ. ಗ್ರಂಥದ ಮುಖಬೆಲೆ ಎಂಟಾಣೆ ಎಂದಿರುತ್ತದೆ. ಅದು ಒಂದಾಣೆಯಿಂದ ಯಾವ ಬೆಲೆಗೆ ಬೇಕಾದರೂ ವಿಕ್ರಯಕ್ಕೆ ಸಿಕ್ಕುತ್ತದೆ. ಚೌಕಾಶಿ ಮಾಡಿ ಕೊಳ್ಳುವ ಕಲೆ ಓದುಗನಿಗೆ ಗೊತ್ತಿರಬೇಕು.

ಆಧುನಿಕ ಸಾಹಿತ್ಯ ಈ ಬೆಲೆಗೆ ದೊರೆಯುವುದಿಲ್ಲ. ಸಾಹಿತಿಗಳೂ ಪ್ರಕಾಶಕರೂ ವಿದೇಶೀಯ ಪ್ರಕಟನೆಗಳನ್ನು ಮೀರಿಸುವ ಹಂಬಲದಲ್ಲಿ ಗ್ರಂಥದ ಬೆಲೆಯ ಕಡೆ ಲಕ್ಷ್ಯವಿಡುವುದಿಲ್ಲ. ೫೦-೬೦ ಪುಟದ ಪುಸ್ತಕಕ್ಕೆ ೮ ಆಣೆ ೧೨ ಆಣೆ ಕೊಡಬೇಕೆಂದರೆ ಬೋರೇಗೌಡನ ಕಣ್ಣು ಕೆಂಪಗಾಗುತ್ತದೆ. ಅಷ್ಟು ಬೆಲೆಗೆ ೪೦೦ ಪುಟದ ಮದನಮೋಹನರಾಜ ಚರಿತ್ರೆ ಅವನಿಗೆ ದೊರಕುತ್ತದೆ. ಫ್ರೆಂಚ್ ಜನರು ಬುದ್ಧಿಯಲ್ಲಿ ಬಹಳ ಮುಂದಿರುವುದಕ್ಕೆ ಅವರಲ್ಲಿ ಪುಸ್ತಕಗಳು ಬಹಳ ಅಲ್ಪಬೆಲೆಗೆ ದೊರೆಯುವುದೂ ಒಂದು ಕಾರಣ. ೧೨೦ ಫ್ರಾಂಕುಗಳಿಗೆ (ಸುಮಾರು ೨೫ ರೂ.) ಇಡಿಯ ಪ್ರಾಚೀನ ಫ್ರೆಂಚ್ ಸಾಹಿತ್ಯದ ಒಂದು ಗ್ರಂಥಭಂಡಾರವೇ ದೊರೆಯುತ್ತದಂತೆ! ಕನ್ನಡದಲ್ಲಿ ಈ ಪರಿಸ್ಥಿತಿ ಬರಬೇಕು. ಅತ್ಯಲ್ಪ ಬೆಲೆಗೆ ಅತ್ಯಮೂಲ್ಯವಾದ ಗ್ರಂಥವೂ ಸಿಕ್ಕಬೇಕು. ಪುಸ್ತಕದ ಬೆಲೆಯನ್ನು ಏರಿಸಿದರೆ ಗ್ರಂಥದ ಬೆಲೆಯೂ ಏರುತ್ತದೆಂದು ಭಾವಿಸುವುದು ಶುದ್ಧ ಮೌಢ್ಯ. ಈಗ ಸಾಹಿತ್ಯ ಕ್ರಾಂತಿಯನ್ನೇ ಮಾಡುತ್ತಿರುವ ಆ ಗ್ರಂಥಗಳ ಮೇಲ್ಪಂಕ್ತಿ ಕನ್ನಡದಲ್ಲಿ ಅನುಸರಣ ಯೋಗ್ಯವಾಗಿದೆ.

೨. ಗ್ರಂಥಗಳನ್ನು ಅಚ್ಚುಮಾಡಿಸಿಟ್ಟುಕೊಂಡುಬಿಟ್ಟರೆ ತಮ್ಮ ಕೆಲಸ ಮುಗಿಯಿತೆಂದು ಪ್ರಕಾಶಕರು ಭಾವಿಸುತ್ತಾರೆ. ಹೊಸ ಪುಸ್ತಕಗಳ ಪರಿಚಯವನ್ನು ಪ್ರಕಟನೆ ವಿಮರ್ಶೆಗಳ ಮೂಲಕ ಮಾಡಿಕೊಡಬೇಕು. ಗ್ರಂಥ ಪ್ರಕಟವಾಗಿರುವ ವಿಚಾರ ಎಲ್ಲರಿಗೂ ತಿಳಿಯುವಂತಾಗಬೇಕು.

೩. ಪುಸ್ತಕ ವ್ಯಾಪಾರಿಗಳಲ್ಲಿ ಒಂದು ವ್ಯವಸ್ಥಿತ ಸೌಹಾರ್ದ ಬೆಳೆಯಬೇಕಾಗಿದೆ. ಕನ್ನಡ ಪುಸ್ತಕದ ಅಂಗಡಿಗೆ ಹೋದರೆ ಎಲ್ಲ ಕನ್ನಡ ಗ್ರಂಥಗಳೂ ಸಿಕ್ಕುವುದೇ ಇಲ್ಲ. ಹತ್ತು ಪುಸ್ತಕ ಬೇಕಾದರೆ ಹತ್ತು

ಅಂಗಡಿ ಸುತ್ತಬೇಕಾಗುತ್ತದೆ. ಇಂಗ್ಲೆಂಡಿನ ಡಬ್ಲ್ಯೂ. ಎಚ್. ಸ್ಮಿತ್, ಫಾಯಿಲ್ಸ್ ಅವರಂತೆ ಎಲ್ಲಾ ಗ್ರಂಥಗಳನ್ನು ಮಾರುವ ವ್ಯವಸ್ಥೆ ಮಾಡಬೇಕು.

೪. ಪುಸ್ತಕ ವ್ಯಾಪಾರಿಗಳು ಅಂಗಡಿಯಲ್ಲಿ ಪುಸ್ತಕಗಳನ್ನಿಟ್ಟು ಕೊಂಡು ಕುಳಿತಿದ್ದರೆ ಸಾಲದು. ಹಳ್ಳಿಪಳ್ಳಿಗಳಿಗೆ ಪ್ರಚಾರಕರನ್ನು ಕಳು ಹಿಸಬೇಕು. ಬೆಂಗಳೂರಿನಂತಹ ದೊಡ್ಡ ಪೇಟೆಗಳಲ್ಲಿ ಮನೆಗೆ ಪುಸ್ತಕ ಗಳನ್ನೊಯ್ದು ಮಾರುವ ವ್ಯವಸ್ಥೆ ಮಾಡಬೇಕು. ಕ್ರಿಸ್ತ ಪ್ರಚಾರಕರು ಮಾರ್ಕನ ಸುವಾರ್ತೆ, ಜೋಹಾನನ ಸುವಾರ್ತೆಗಳನ್ನು ಕೂಡ ಮನೆ ಮನೆಗೆ ಮಾರುವಾಗ ಸಾಹಿತ್ಯ ಗ್ರಂಥಗಳನ್ನು ಮಾರುವ ಕೆಲಸ ಹೆಚ್ಚು ಸುಲಭಸಾಧ್ಯವಾಗುತ್ತದೆ.

೫. ಗ್ರಂಥಕರ್ತರಿಗೂ ಪ್ರಕಾಶಕರಿಗೂ ಪುಸ್ತಕ ವ್ಯಾಪಾರಿಗಳಿಗೂ ನಿಕಟಸಂಬಂಧವನ್ನು ಕಲ್ಪಿಸಿ ಅವರು ಪರಸ್ಪರ ಹಿಂಸೆ ಕೊಡದಂತೆಯೂ, ವ್ಯಾವಹಾರಿಕ ಪ್ರಾಮಾಣಿಕತೆಯನ್ನು ಅವಲಂಬಿಸುವಂತೆ ಮಾಡುವುದಕ್ಕೂ ಒಂದು ಸಂಸ್ಥೆಯಾಗಬೇಕು.

ಇಂದಿನ ಪರಿಸ್ಥಿತಿಯಲ್ಲಿ ಪ್ರಕಾಶಕರಿಗೆ ಕನ್ನಡ ಪುಸ್ತಕಗಳನ್ನು ಅಚ್ಚುಹಾಕಿಸುವುದಕ್ಕೆ ಧೈರ್ಯ ನಂಬಿಕೆಗಳು ಬೇಕು; ಗ್ರಂಥಕರ್ತರಿಗೆ ಬದುಕುವುದಕ್ಕೆ 'ಅನ್ನ' ಬೇಕು; ಪುಸ್ತಕ ವ್ಯಾಪಾರಿಗಳಿಗೆ ಕನ್ನಡ ಗ್ರಂಥ ಗ್ರಾಸ ಬೇಕು.

ಇವೆಲ್ಲವನ್ನೂ ಒದಗಿಸಬಲ್ಲವರು – ಓದುಗರು. ಆ ಸಂಖ್ಯೆ ಬೆಳೆಯ ಬೇಕಾದುದೂ ಗ್ರಂಥಗಳು ಅವರ ಅನುಕೂಲವನ್ನವಲಂಬಿಸಿ ಅಭಿರುಚಿ ಯನ್ನು ಸುಧಾರಿಸಬೇಕಾದುದೂ ಆವಶ್ಯಕ.

ಕನ್ನಡ ನುಡಿ ೯–೬–೪೫

———

## ೨೪. ಸಾಹಿತ್ಯದಲ್ಲಿ ಕೋಮುವಾರು ವ್ಯಾಧಿ

ಸಾಹಿತ್ಯದಲ್ಲಿ ನುಗ್ಗುತ್ತಿರುವ ಕೋಮುವಾರು ಕಾಹಿಲೆಯನ್ನು ಎದುರಿಸಲು ಮೊನ್ನೆ ಕಲ್ಕತ್ತೆಯಲ್ಲಿ ಒಂದು ಸಭೆ ಸೇರಿತ್ತು. 'ಮಾಡರ್ನ್ ರಿವ್ಯೂ' ಪತ್ರಿಕಾ ಸಂಪಾದಕರಾಗಿರುವ ಬಾಬು ರಮಾನಂದ ಚಟರ್ಜಿಯವರು ಅಧ್ಯಕ್ಷರಾಗಿದ್ದರು. ಅಂದಿನ ಪ್ರಧಾನ ಭಾಷಣಗಾರರು ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ ಶರತ್‌ಚಂದ್ರ ಚಕ್ರವರ್ತಿಗಳು. "ಕೇವಲ ಸಾಹಿತ್ಯದೃಷ್ಟಿಯಲ್ಲಿಯೇ ಮಗ್ನನಾಗಿರುವುದಲ್ಲ ಸಾಹಿತಿಯ ಕರ್ತವ್ಯ. ದೇಶದ ಜೀವಜೀವಾಳವನ್ನೇ ಹೀರುತ್ತಿರುವ ಪೀಡನೆಗಳನ್ನು ನಿವಾರಿಸಲೆತ್ನಿಸಬೇಕು—ಸಮಸ್ಯೆಗಳನ್ನು ಎದುರಿಸಬೇಕು. ಇಂದು ಬಂಗಾಳವು ಕೋಮುವಾರು ವ್ಯಾಧಿಯ ಕೈಯಲ್ಲಿ ಸಿಕ್ಕಿದೆ. ಅದರ ವಿಷಗಾಳಿ ಸಾಹಿತ್ಯದಲ್ಲಿಯೂ ತಲೆಹಾಕಿದೆ. ಇದನ್ನು ಬೆಳೆಯಲವಕಾಶ ಕೊಟ್ಟರೆ ಬಂಗಾಳಾ ಸಾಹಿತ್ಯದ ಸ್ವರೂಪ ಮಾತ್ರವಲ್ಲದೆ ಬಂಗಾಳದ ಸಂಸ್ಕೃತಿಯ ಸ್ವರೂಪವೇ ನಾಶವಾಗಿಹೋಗುತ್ತದೆ" ಎಂದು ಶರತ್‌ಬಾಬುಗಳು ಎಚ್ಚರಿಸಿದ್ದಾರೆ. ಇದರ ವಿಷಫಲಗಳನ್ನು ನಾವೂ ಭೋಗಿಸುತ್ತಲಿದ್ದೇವೆ. ನಮ್ಮ ಜನ ಜೀವನದಲ್ಲಿ ಮಾತ್ರವಲ್ಲದೆ ವಿಶ್ವವಿದ್ಯಾನಿಲಯವೇ ಮೊದಲಾದ ಶಾರದಾ ಮಂದಿರಗಳಲ್ಲಿಯೂ ಕೋಮುವಾರು ಭೂತವು ತಲೆಹಾಕಿದೆ. ಇದರ ಪರಿಹಾರಕ್ಕೆ ಮನಸ್ಸುಕೊಡುವುದು ಸಾಹಿತಿಯ ಧರ್ಮವಲ್ಲವೇನು? ಜೀವನವು ಸರ್ವತೋಮುಖವಾಗಿ ಸುಂದರವಾಗಬೇಕೆಂದು ಬಯಸುವ ಸಾಹಿತಿಯು ಈ ವ್ಯಾಧಿಯನ್ನು ನಿವಾರಿಸಿದ ಹೊರತೂ ತನ್ನ ಆಶಯನ್ನು ಹೇಗೆ ಸಾಧಿಸಬಲ್ಲ?

ವಿಶ್ವವಾಣಿ-ಆಗಸ್ಟು ೩೬

———

# ೨೫. ಪುರಂದರದಾಸರ ಪುಣ್ಯದಿನ

ದಕ್ಷಿಣಾದಿ ಪದ್ಧತಿಯ ವ್ಯಾಪ್ತಿ ಇರುವೆಡೆಗಳಲ್ಲೆಲ್ಲಾ "ತ್ಯಾಗರಾಜ ಜಯಂತಿ"ಯನ್ನು ವಿಜೃಂಭಣೆಯಿಂದ ನೆರವೇರಿಸುವ ಪದ್ಧತಿ ಪ್ರಚಾರಕ್ಕೆ ಬಂದಿದೆ. ತ್ಯಾಗರಾಜರು ಜನಿಸಿದ್ದು ತಮಿಳುದೇಶದಲ್ಲಿಯಾದರೂ ಅವರು ತಮ್ಮ ಕೃತಿಗಳನ್ನೆಲ್ಲಾ ತೆಲುಗಿನಲ್ಲಿ ರಚಿಸಿ ಕೃತಾರ್ಥರಾಗಿದ್ದಾರೆ. ಇಂದು ತ್ಯಾಗರಾಜರ ಬಗ್ಗೆ ತಮಿಳು, ತೆಲುಗು, ಕರ್ಣಾಟಕ ದೇಶಗಳು ಒಂದೇ ಬಗೆಯ ಪ್ರೇಮ ಗೌರವಗಳನ್ನು ತಾಳಿ ಅವರ ಜಯಂತಿಯನ್ನು ಉತ್ಸಾಹ ದಿಂದಲೂ ವಿಜೃಂಭಣೆಯಿಂದಲೂ ಮಾಡತ್ತಿವೆ.

ದಕ್ಷಿಣಾದಿ ಸಂಗೀತಕ್ಕೆ ಒಂದು ತೆರನ ಸಾರ್ವಜನಿಕ ಸ್ವರೂಪ ಬಂದದ್ದು ತ್ಯಾಗರಾಜರಿಂದ. ಅವರ ಹಾಗೆ ಅನೇಕರು ಕೃತಿಗಳನ್ನು ಮಾಡಿ ಹೊಸಹೊಸ ರಾಗಗಳನ್ನು ಸೃಷ್ಟಿಸಿದ ಕಲಾವಿದರಿದ್ದಾರೆ. ಆದರೆ ತ್ಯಾಗರಾಜರ ತ್ಯಾಗಜೀವನ, ಕಲೆಗಿತ್ತ ಸಾರ್ವತ್ರಿಕ ಸ್ವರೂಪ ಅವರ ಹೆಸರನ್ನು ಇತರರದ್ದಕ್ಕಿಂತಲೂ ಹೆಚ್ಚು ಜನಮಾನ್ಯವನ್ನಾಗಿ ಮಾಡಿವೆ. ತ್ಯಾಗರಾಜರು ಉತ್ತಮ ಕಲಾವಿದರಾಗಿದ್ದುದು ಮಾತ್ರವಲ್ಲದೆ ಉತ್ತಮ ಮನುಷ್ಯರೂ ಆಗಿದ್ದರು. ಅನುಭವವೇದ್ಯವಾದ, ಸಾಂತಃಕರಣಕ್ಕೆ ಗೋಚರವಾಗುವ ಸತ್ಯದ ತತ್ವಗಳಿಗೆ ಕಲೆಯ ಸ್ವರೂಪ ಕೊಡುತ್ತ ಬಂದರು. ತಮ್ಮ ಮತ್ತು ದೇವರ ಸಂಬಂಧವನ್ನು ಬಗೆಬಗೆಯಾಗಿ ಬಣ್ಣಿಸಿದರು. ದೇವರನ್ನು ಭಕ್ತರಂತೆ ಆರಾಧಿಸಿದರು, ಪ್ರಜೆಯಂತೆ ಸೇವಿಸಿದರು, ಇನಿಯಳಂತೆ ಪ್ರೇಮಿಸಿದರು. ದೇವರನ್ನು ಕಾಣದಿದ್ದಲ್ಲಿ ತವಕ ಪಡುತ್ತಿದ್ದರು, ಕಂಡಾಗ ಹಾಡಿ ಹೊಗಳುತ್ತಿದ್ದರು.

ಈ ತೆರನ ಮಧುರ ಸಂಬಂಧವನ್ನು ಕಲ್ಪಿಸಿಕೊಂಡಿದ್ದ ಹೆಚ್ಚುಗಾರಿಕೆ ತ್ಯಾಗರಾಜರದು. ಅಂತಹ ಮಹಾನುಭಾವರು ತಿರುವಡಿಯಲ್ಲಿ ಜನಿಸಲಿ, ಪಂಡರಾಪುರದಲ್ಲಿ ಜನಿಸಲಿ, ನಮಗೆ ಪೂಜ್ಯರು, ಮಾನ್ಯರು.

ಆದರೆ ರೂಢಿಶೃಂಖಲಾಬದ್ಧವಾದ ಜನತೆ ವಿಶಾಲ ದೃಷ್ಟಿಯಿಂದ ನೋಡುವುದಿಲ್ಲ. ತಮ್ಮ ಆಚರಣೆಗಳ ಸುತ್ತಲೂ ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ಕೂಪ ಮಂಡೂಕಗಳಂತೆ ವಾಸಿಸಲು ಆಶಿಸುತ್ತಾರೆ. ಇದು

ನಮ್ಮ ದೇಶದ ಸಂಗೀತಗಾರರಿಗೆ ಅನ್ವಯಿಸುವಷ್ಟು ಪ್ರಾಯಶಃ ಮತ್ತೆ ಯಾರಿಗೂ ಅನ್ವಯಿಸುವುದಿಲ್ಲ. ತ್ಯಾಗರಾಜರನ್ನು ಹೊಗಳಿ ಪೂಜಿಸುವ ಸಂಭ್ರಮದಲ್ಲಿ ಇತರ ಮಹಾನುಭಾವರನ್ನು ಮರೆಯುತ್ತಾರೆ. ಇದಕ್ಕೆ ಸಂಗೀತಗಾರರು "ಪುರಂದರದಾಸ"ರಿಗೆ ತೋರಿರುವ ಮನ್ನಣೆಯೆ ತಕ್ಕ ಉದಾಹರಣೆಯಾಗಿದೆ.

ಆಂಧ್ರಸಾಹಿತ್ಯದಲ್ಲಿ ತ್ಯಾಗರಾಜರಿಗೆ ಯಾವ ಸ್ಥಾನವಿದೆ ಕನ್ನಡ ಸಾಹಿತ್ಯದಲ್ಲಿ ಪುರಂದರದಾಸರಿಗೆ ಅದೇ ಸ್ಥಾನವಿದೆ. ಭಕ್ತಿಯ ಪ್ರಸಾರಕ್ಕೆ ಕಲೆಯು ತಲೆಬಾಗಬೇಕೆಂಬ ಮತವನ್ನೇ ಇಬ್ಬರೂ ಪ್ರತಿಪಾದಿಸುತ್ತ ಬಂದರು. ಮನೆಮನೆಯಲ್ಲಿ ಭಕ್ತಿಯ ಹಣತೆಯನ್ನು ಹಚ್ಚುವ ಕೆಲಸವನ್ನು ಇಬ್ಬರೂ ನಿರ್ವಹಿಸಿದರು. ಸಂಗೀತದ ಸಶಾಸ್ತ್ರ ಬೆಳವಣಿಗೆಗೆ ಇಬ್ಬರೂ ಮನತೆತ್ತರು. ಆದರೂ ತ್ಯಾಗರಾಜರ ಪೂರ್ವಜರಾದ – ತ್ಯಾಗರಾಜರಿಂದಲೇ ಪೂಜೆಗೊಂಡಿರುವ—ಪುರಂದರದಾಸರ ಪುಣ್ಯ ದಿನಾಚರಣೆಯು ದ್ವೈತಮತಾವಲಂಬಿಗಳಲ್ಲಿ ಮಾತ್ರ ಉಳಿದಿದೆ. ಸಂಗೀತಕಲಾವಿದರು ತಮ್ಮದೆಂದು ಮಾಡಬೇಕಾದ ಹೆಮ್ಮೆಯ ಕಾರ್ಯಭಾರವನ್ನು ಒಂದು ಪಂಗಡದ ಜನತೆ ಧರ್ಮದೃಷ್ಟಿಯಿಂದ ಆಚರಿಸುತ್ತ ಬಂದಿದೆ.

ಕನ್ನಡಿಗರ ಅಭಿಮಾನಶೂನ್ಯತೆಗೆ ಇದು ದೊಡ್ಡ ದೃಷ್ಟಾಂತವಾಗಿದೆ. ತೆಲುಗಿನ ಕೀರ್ತನೆಗಳ ಮೋಹವೊಂದೆಡೆಯಲ್ಲಿ, ನೈಸರ್ಗಿಕವಾದ ಚಿತ್ತದಾಸ್ಯ (Slave-mentality) ವೊಂದೆಡೆಯಲ್ಲಿ ಕೂಡಿ ಪುರಂದರದಾಸರ ಸ್ಥಾನಕ್ಕೆ ಚ್ಯುತಿ ಬಂದಿದೆ. ಸಂಗೀತರತ್ನ ವಿದ್ವಾನ್ ವಾಸುದೇವಾಚಾರ್ಯರನ್ನು ಒಬ್ಬ ಗೆಳೆಯರು "ಆಚಾರ್ಯರೇ, ತಾವು ಕನ್ನಡಿಗರಾಗಿ ತೆಲುಗಿನಲ್ಲಿ ಕೃತಿಗಳನ್ನೇಕೆ ರಚಿಸಿರುವಿರಿ" ಎಂದು ಕೇಳಿದ್ದಕ್ಕೆ ಆಚಾರ್ಯರು "ಸಂಗೀತಕ್ಕೆ ಕನ್ನಡ ಭಾಷೆಯು ಸರಿಯಿಲ್ಲ" ಎಂದು ಹೇಳಿದರಂತೆ. ಇದಕ್ಕೆ ಗಾಯಕಶಿಖಾಮಣಿ ಮುತ್ತಯ್ಯಭಾಗವತರ ಕೀರ್ತನೆಗಳೇ ದೊಡ್ಡ ಉತ್ತರವಾಗಿದೆ. ಪುರಂದರಾದಿ ದಾಸರ ಕೀರ್ತನೆಗಳನ್ನು ಘನವಾಗಿ ಶಾಸ್ತ್ರೋಕ್ತವಾಗಿ ಹಾಡಬಲ್ಲ ಆಚಾರ್ಯರೇ ಕನ್ನಡಭಾಷೆಯು ಕೀರ್ತನೆಗಳಿಗೆ ಸರಿಯಿಲ್ಲವೆಂದು ಅಭಿಪ್ರಾಯಪಡುವುದೆಷ್ಟು ವಿಷಾದಕರ. ಕೀರ್ತಿಶೇಷ ಗಾಯನಾಚಾರ್ಯ ಬಿಡಾರದ ಕೃಷ್ಣಪ್ಪನವರು ದಾಸರ ಕೀರ್ತನೆ

ಗಳಿಂದಲೇ ಕಛೇರಿಯನ್ನು ಮಾಡುತ್ತಿದ್ದರು. ಕಛೇರಿಗವಶ್ಯಕವಾದ ರಾಗ ವಿಸ್ತಾರ, ಸ್ವರಸಂಯೋಜನೆ, ಪಲ್ಲವಿ ಕೆಲಸಗಳೆಲ್ಲವನ್ನು ಪುರಂದರಾದಿ ದಾಸರ ಕೀರ್ತನೆಗಳಲ್ಲಿಯೇ ನಿರ್ವಹಿಸುತ್ತಿದ್ದರು. ಇಂದಿಗೂ ಗಾಯನಾಚಾರ್ಯರ ಶಿಷ್ಯಂದಿರಾದ ದೇವೇಂದ್ರಪ್ಪನವರೂ, ಪುಟ್ಟಸ್ವಾಮಿಯವರೂ ಹಾಗೆಯೇ ಕಛೇರಿಗಳನ್ನು ನಿರ್ವಹಿಸಬಲ್ಲರು. ಬೆಂಗಳೂರಿನ ವಿದ್ವಾನ್ ಸುಬ್ಬರಾಮಯ್ಯನವರೂ, ಧಾರವಾಡದ ಗುರುರಾವ್ ದೇಶಪಾಂಡೆಯವರೂ ದಾಸರಾಯರ ಕೀರ್ತನೆಗಳ ಕಛೇರಿಗಳನ್ನು ಮಾಡುತ್ತಾರೆ.

ದಕ್ಷಿಣಾದಿ ಪದ್ಧತಿಯ ಗಾಯನವು "ಕರ್ನಾಟಕ ಸಂಗೀತವೆಂದು ಹೆಸರಾಗುವುದಕ್ಕೆ ಹದಿನಾರನೆಯ ಶತಮಾನದಲ್ಲಿ ಜೀವಿಸಿದ್ದ "ಷಡ್ರಾಗ ಚಂದ್ರೋದಯ," "ರಾಗಮಾಲಾ" "ರಾಗಮಂಜರಿ" "ನರ್ತನ ನಿರ್ಣಯ" ಮೊದಲಾದ ಶಾಸ್ತ್ರೀಯ ಗ್ರಂಥಗಳನ್ನು ವಿರಚಿಸಿದ ಪುಂಡರೀಕ ವಿಠ್ಠಲನೇ ಕಾರಣಕರ್ತನು. ಈತನು ಖಾಂದೇಶದಲ್ಲಿದ್ದ ಕನ್ನಡಿಗನು. ಅವನಾನಂತರ ಬಂದ ರಾಮ ಅಮಾತ್ಯ, ವೆಂಕಟಮುಖಿ, ದಾಮೋದರ ಮಿಶ್ರ, ಅಹೋಬಲ ಪಂಡಿತ, ಭಾವಭಟ್ಟ, ಕೃಷ್ಣಾನಂದ ವ್ಯಾಸ ಇವರೆಲ್ಲಾ ಒಂದಲ್ಲ ಒಂದು ಬಗೆಯಲ್ಲಿ ಪುಂಡರೀಕ ವಿಠ್ಠಲನ ಮಾರ್ಗವನ್ನೇ ಹಿಡಿದವರು. ಪುಂಡರೀಕ ವಿಠ್ಠಲನ ವಿದ್ವತ್ತಿಗೆ ಪ್ರಸಾರವನ್ನು ಕಲ್ಪಿಸಿ ಸಂಗೀತವು ಸಾರ್ವಜನಿಕ ಸ್ವತ್ತಾಗುವಂತೆ ಮಾಡಿದ ಕೀರ್ತಿ ಪುರಂದರದಾಸರದು ಮತ್ತು ತ್ಯಾಗರಾಜರದು.

ವಿಶ್ವವಾಣಿ–ಜುಲೈ ೧೯೩೬

---

## ೨೬. ಬಸವ ಜಯಂತಿ

ಕನ್ನಡನಾಡಿನಲ್ಲೆಲ್ಲಾ ಅಭೂತಪೂರ್ವವಾದ ಉತ್ಸಾಹ ಶ್ರದ್ಧೆಗಳಿಂದ ಬಸವ ಜಯಂತ್ಯುತ್ಸವವು ಆಚರಿಸಲ್ಪಡುತ್ತಿದೆ. ಕೀರ್ತನೆ ಉಪನ್ಯಾಸಾದಿಗಳ ಮೂಲಕ ಜನತೆಗೆ ಧಾರ್ಮಿಕ ಹಾಗೂ ತಾತ್ವಿಕ ವಿಚಾರಗಳ ಮೇಲೆ ತಿಳಿವನ್ನುಂಟುಮಾಡುವ ಪ್ರಯತ್ನ ನಡೆಯುತ್ತಿದೆ. ಬಸವಣ್ಣನವರ ಧರ್ಮಾನುಯಾಯಿಗಳಾದ ವೀರಶೈವರು ಮಾತ್ರವಲ್ಲದೆ ಇತರರೂ ಈ

ಮಹೋತ್ಸವದಲ್ಲಿ ಬೆರೆತು ತಮ್ಮ ಶ್ರದ್ಧಾಂಜಲಿಯನ್ನರ್ಪಿಸುತ್ತಿದ್ದಾರೆ. ಈ ೧೦-೧೨ ವರ್ಷಗಳಲ್ಲಿ ಬಸವ ಜಯಂತ್ಯುತ್ಸವವು ವಿಶೇಷವಾಗಿ ಬೆಳೆದು ಒಂದು ವಸಂತಸಾಹಿತ್ಯೋತ್ಸವದ ಸ್ವರೂಪವನ್ನು ತಳೆದಿರುವುದು ಅಭಿನಂದನೀಯವಾಗಿದೆ.

ಬಸವಣ್ಣನವರ ಮಹೋನ್ನತವಾದ ಜೀವನ, ತ್ಯಾಗ, ವೈರಾಗ್ಯ, ಭಕ್ತಿ, ಸಾಹಿತ್ಯಸೇವೆ ಜನತೆಗೆ ಹೆಚ್ಚು ಹೆಚ್ಚು ಗೊತ್ತಾಗುತ್ತಿರುವದೇ ಈ ಉತ್ಸಾಹದ ಕಾರಣವೆನ್ನಬಹುದು. ಜಗತ್ತಿನ ಅನಂತ ದುಃಖೋಪಶಮನಕ್ಕೆ ತನ್ನ ಜೀವನವನ್ನು ನಿವೇದಿಸಿದ ಈ ಮಹಾವ್ಯಕ್ತಿಯ ಜೀವನ ಚರಿತ್ರೆ ಒಂದು ಪುಣ್ಯಕಾವ್ಯವಾಗಿದೆ. ಸಾಮಾನ್ಯಸ್ಥಿತಿಯಿಂದ ಜೀವನ್ಮುಕ್ತಾವಸ್ಥೆಗೇರಿದ ಇವರ ಜೀವನವು ಅನುಸರಣಯೋಗ್ಯವೂ ಆದರ್ಶಮಯವೂ ಆದ ಪುಣ್ಯಚರಿತ್ರೆಯಾಗಿದೆ.

ಇಹದಲ್ಲಿ ಮಾನವನು ಸುಖದ ಸಲುವಾಗಿ ಆಶಿಸಬಹುದಾದುದೆಲ್ಲವೂ ಬಸವಣ್ಣನವರಿಗೆ ಕರಗತವಾಯಿತು. ಪದವಿ, ಐಶ್ವರ್ಯ, ಮಡದಿ, ಮಕ್ಕಳು, ಪ್ರಿಯರಾದ ಪರಿಜನರು, ನಯವಿನಯಶಾಲಿಗಳಾದ ಭಕ್ತರು— ಆದರೆ ಮನಸ್ಸಿಗೆ ಶಾಂತಿ ಮಾತ್ರ ದೊರೆಯಲಿಲ್ಲ. ಅವರ ಬಾಳು ಈ ಐಹಿಕ ವಿಲಾಸದಲ್ಲಿ ಲೀನವಾಗಲಿಲ್ಲ. ಈಯೆಲ್ಲ ಸಂಭ್ರಮದ ಕ್ಷಣಭಂಗುರತೆ ಅವರಿಗೆ ಚೆನ್ನಾಗಿ ಮನವರಿಕೆಯಾಗಿತ್ತು. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನ ವ್ಯವಹಾರವಿದೆಂದು ಅರಿತಿದ್ದರು. ತಮ್ಮನ್ನು ಆವರಿಸಿದ್ದ ಮಾಯೆಯ ಉಪಾಧಿಯನ್ನು ಪರಿಹರಿಸಿಕೊಳ್ಳಬೇಕಾಗಿತ್ತು. ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ, ಎನ್ನನ್ನು ಕಾಯಯ್ಯಾ ಕಾಯಯ್ಯಾ ಎಂದು ಮೊರೆಯಿಟ್ಟರು.

“ ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ
ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ
ಇದಾವ ಪರಿಯಲ್ಲಿ ಕಾಡಿತ್ತು ಮಾಯೆ
ಈ ಮಾಯೆ ಕಳೆವರೆ ಎನ್ನಳವಲ್ಲ
ನೀವೇ ಬಲ್ಲಿರಿ ಕೂಡಲ ಸಂಗಮದೇವಾ ”

ಜೀವನದಲ್ಲಿ ಅವಿನಾಶಿಯಾದುದೂ ಅನಂತವಾದುದೂ ಆದುದನ್ನು ದೊರಕಿಸಿಕೊಳ್ಳಬೇಕು ಎಂಬುದರ ಕಡೆಗೆ ಲಕ್ಷ್ಯ ಹೋಯಿತು. ಆದರೆ ಚಿತ್ತ ಬೇರೆ ಎಡೆಗೆ ಎಳೆದೊಯ್ಯುತ್ತಿತ್ತು. ಈ ವಿಲೋಭನೆ ಹರಿಯಲೆಂದು

" ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ
ಇರಿಸು ಕೂಡಲ ಸಂಗಮದೇವಾ "

ಎಂದು ಬೇಡಿ ತಮ್ಮನ್ನು ತ್ರಿಕರಣಪೂರ್ವಕವಾಗಿ ಶಿವನಿಗೆ ಅರ್ಪಿಸಿಕೊಂಡುಬಿಟ್ಟರು. ದೇವನ ಕೃಪೆ ಮೂಡಿದರೆ ಕೊರಡು ಕೊನರುವುದಿಲ್ಲವೇ, ಬರಡು ಹಯನಾಗುವುದಿಲ್ಲವೇ, ವಿಷವೆಲ್ಲ ಅಮೃತವಾಗುವುದಿಲ್ಲವೇ ? ಜಗತ್ತಿನ ಸರ್ವ ವ್ಯಾಪಾರವನ್ನೂ ನಡೆಸುವ ಮಹಿಮಾಶಾಲಿಗೆ ಈ ಒಂದು ಜೀವದ ಭಾರ ಹೊರೆಯೇ ? ' ಬಳ್ಳಿಗೆ ಕಾಯಿದಿಮ್ಮಿತ್ತೆ ? ' ಕಾಮಲೋಭಗಳೆರಡೂ ದೂರಾಗುವವರೆಗೆ ಶಿವಕೃಪೆಯಾಗುವ ಸಂಭವವಿರಲಿಲ್ಲ.

" ಹಾವ ತಿಂದವರ ನುಡಿಸಲುಬಹುದು
ಗರ ಹೊಡೆದವರ ನುಡಿಸಲುಬಹುದು
ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯ !
ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರಯ್ಯಾ
ಕೂಡಲ ಸಂಗಮದೇವಾ !"

ಎಂದು ತಮ್ಮ ಐಹಿಕ ಸಿರಿಯನ್ನು ಶಿವಶರಣರ ಚರಣಧೂಳಿಯನ್ನಾಗಿಸಿಬಿಟ್ಟರು. ತಾವು ಉತ್ತಮ ಕುಲದಲ್ಲಿ ಹುಟ್ಟಿದೆವೆಂಬ ಮದವನ್ನು ಮುರಿದರು.

" ದೇವದೇವ ಎನ್ನ ಬಿನ್ನಪವ ಅವಧಾರು
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನೆಲ್ಲನೊಂದೇ ಎಂಬೆ.

ಹಾರುವ ಮೊದಲು ಶ್ವಪಚಕಡೆಯಾಗಿ
ಭವಿಯಾದವರನೊಂದೇ ಎಂಬೆ.
ಈ ಹೀಗೆಂದು ನಂಬುವುದೆನ್ನ ಮನವು
ಈ ನುಡಿದ ನುಡಿಯೊಳಗೆಳ್ಳ ಕೊನೆಯಷ್ಟು
ಸಂದೇಹವುಳ್ಳರೆ ಹಲ್ಲುದೋರ
ಮೂಗುಕೊಯ್ಯಿ ಕೂಡಲ ಸಂಗಮದೇವಾ."

* * * *

"ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ
ಕಕ್ಕಯ್ಯನೊಕ್ಕುದನಿಕ್ಕಿ ನೋಡಯ್ಯಾ
ದಾಸಯ್ಯ ಶಿವಧಾನವ ನೆರೆಯ ನೋಡಯ್ಯಾ
ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ
ಉನ್ನತ ಮಹಿಮ, ಕೂಡಲ ಸಂಗಮದೇವಾ
ಶಿವಧೋ, ಶಿವಧೋ."

ಹಾರುವತನ ಗುಣದಿಂದಲ್ಲದೆ ಹುಟ್ಟಿನಿಂದ ಬರುವುದಿಲ್ಲ. 'ಆನು ಹಾರುವನೆಂದೊಡೆ ಕೂಡಲ ಸಂಗಯ್ಯ ನಗುವನಯ್ಯಾ' ಎಂದು ಹೇಳಿದರು.

ತಮ್ಮ ಜೀವನವನ್ನು ನಿರಂಹಂಕಾರ ನಿರಾಡಂಬರದ ತುಟ್ಟತುದಿಗೆ ಒಯ್ದುಬಿಟ್ಟರು.

"ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮ ಪಾದಸಾಕ್ಷಿ ಎನ್ನ ಮನಸಾಕ್ಷಿ ಕೂಡಲ ಸಂಗಮ
ದೇವಾ ಎನಗಿದೇ ದಿಬ್ಯ."

ಎಂಬುದನ್ನು ತಮ್ಮ ಗಾಯಿತ್ರಿಯನ್ನಾಗಿ ಮಾಡಿಕೊಂಡರು.

ಅಧ್ಯಾತ್ಮಸಾಧನೆಗೆ ಮನೋಭೂಮಿಕೆ ಸಿದ್ಧವಾದೊಡನೆಯೇ ಗುರು ಕರುಣದ ಅರುಣೋದಯವಾಯಿತು. ಅನುಭಾವಿಗಳ ಅರಸರಾದ ಅಲ್ಲ ಮರು ತಾವಾಗಿಯೇ ಶಿಷ್ಯರನ್ನರಸುತ್ತ ಬಂದರು. ಶಿಷ್ಯನಿಗೆ ಭಕ್ತಿ, ಜ್ಞಾನ, ವೈರಾಗ್ಯಗಳ ಗಡಚಾದ ಮಾರ್ಗವನ್ನೂ ಹಸನು ಮಾಡಿಕೊಟ್ಟು

ಅವನು ತನ್ನ ಜೀವನದ ಉತ್ಕ್ರಾಂತಿಯನ್ನು ಸಾಧಿಸುವಂತೆ ಅನುಗ್ರಹಿಸಿದರು.

ಈ ಉತ್ಕ್ರಾಂತಿ ಸಾಧನೆ, ಸಾಧನಮಾರ್ಗದಲ್ಲಿ ಬಸವಣ್ಣನವರು ಪಟ್ಟ ಅನುಭವಗಳೇ ಇಂದು ನಮಗೆ ಬೇಕಾಗಿರುವ ವಿಚಾರಗಳಾಗಿವೆ. ಶಿವನನ್ನು ಮನಸ್ಸು ತೆರೆದು ಸ್ವಾಗತಿಸಿದರು. ಸರ್ವನಿಗೆ ಏನು ಪ್ರಿಯವೋ ಅದನ್ನು ನುಡಿವರು, ಏನು ಹಿತವೋ ಅದನ್ನು ಆಚರಿಸುವರು, ಏನು ಇಷ್ಟವೋ ಅದನ್ನು ಸ್ವೀಕರಿಸುವರು. ತಮ್ಮ ಜೀವನ ಪ್ರಣತೆಯನ್ನು ಆ ಮಹಾ ಬೆಳಗಿನಲ್ಲಿ ತೇಲಿಬಿಟ್ಟು ಆ 'ದೀಪಾವಳಿ'ಯನ್ನು ನೋಡಿ ಹಿರಿಹಿರಿ ಹಿಗ್ಗಿದರು. ದೇವನನ್ನು ಒಮ್ಮೆ ಬೇಡುವರು, ಒಮ್ಮೆ ಕಾಡುವರು, ಒಮ್ಮೆ ಒಲಿಯುವರು, ಒಮ್ಮೆ ಮುನಿಯುವರು. ಅವನ ಕರುಣೆಯಲ್ಲಿ ಸ್ಥಿರ ನಂಬುಗೆಯನ್ನೊಮ್ಮೆ ಸೂಚಿಸುವರು ; ಒಮ್ಮೆ ಅಪನಂಬುಗೆಯನ್ನು ತೋರುವರು. ಈ ಸ್ಥಿತಿಯನ್ನು

" ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕ್ಕೆ ಭಾನುವಿನ ಉದಯದ ಚಿಂತೆ
ಭ್ರಮರಕ್ಕೆ ಪರಿಮಳದ ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲ ಸಂಗಮದೇವರ ನೆನವ ಚಿಂತೆ "

ಎಂದು ವರ್ಣಿಸಿದ್ದಾರೆ. ಕೊನೆಗೆ 'ಕರಿಯು ಕನ್ನಡಿಯೊಳಗಡಗಿದಂತಯ್ಯಾ. ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವಾ' ಎಂಬ ಮುಕ್ತವಾಕ್ಯ ಬಸವಣ್ಣನವರ ಬಾಯಿಂದ ಹೊರಡುತ್ತದೆ. ಸಂಗನ ವೈಭವವನ್ನು ಕಂಡು ಬಸವಣ್ಣನವರು

" ಸಮಸ್ತ ಕತ್ತಲೆಯ ಮುಸುಕವ ಕಳೆದಿಪ್ಪ ಇರವ ನೋಡಾ !
ಬೆಳಗಿನ ಬೆಳಗಿಗು ಸಿಂಹಾಸನವಾಗಿ ಬೆಳಗುವ ಬೆಳಗ ಕೂಡಿದ ಕೂಟವ
ಕೂಡಲ ಸಂಗಯ್ಯ ತಾನೇ ಬಲ್ಲ "

ಎಂದು ನುಡಿಯುತ್ತಾರೆ. ವಿಮುಕ್ತಜೀವನದ ಸರ್ವಚೇತನವನ್ನೂ ನಮ್ಮ ನಾಡಿನ ಉದ್ಧಾರಕ್ಕೆ ಬಸವಣ್ಣನವರು ಧಾರೆಯೆರೆದರು. ಮಾನವ ಕೋಟಿಗೇ ಆದರ್ಶಪ್ರಾಯರಾಗಿ ಆತ್ಮೋನ್ನತಿಯ ಮಾರ್ಗವನ್ನು ತೋರಿಸಿ

ಕೊಟ್ಟರು. ಬಸವಣ್ಣನವರು ಕನ್ನಡನಾಡಿನಲ್ಲಿ ಹುಟ್ಟಿ ಕನ್ನಡನಾಡಿನಲ್ಲೇ ತಮ್ಮ ಜೀವನಯಾತ್ರೆಯನ್ನು ಮುಗಿಸಿ ತಮ್ಮ ಅನುಭವಾಮೃತವನ್ನು ಕನ್ನಡದಲ್ಲಿಯೇ ಕೂಡಿಟ್ಟು ಹೋಗಿದ್ದರೂ ಜಗಜ್ಜ್ಯೋತಿಗಳಲ್ಲಿ ಸ್ಥಾನವನ್ನು ದೊರಕಿಸಿಕೊಂಡಿದ್ದಾರೆ. ತೆಲುಗು, ತಮಿಳು, ಕಾಶ್ಮೀರದೇಶಗಳಿಂದ ಜನರು ಬಂದು ಅವರ ಸಂದೇಶವನ್ನು ತಮ್ಮ ತಮ್ಮ ದೇಶಗಳಿಗೆ ಒಯ್ದರು. ಇಂದು ಅವರ ಶಿಷ್ಯಕೋಟಿಗೆ ಸೇರಿದವರು ಬಸವಣ್ಣನವರ ದಿವ್ಯ ಸಂದೇಶವನ್ನು ಜಗತ್ತಿನ ಎಲ್ಲೆಡೆಗೂ ಒಯ್ದು ಲೋಕಕಲ್ಯಾಣವನ್ನು ಸಾಧಿಸಬೇಕು.

ಬಸವಭಾನುವಿನ ಉದಯದಿಂದ ಕನ್ನಡ ಜನ, ಧರ್ಮ, ಸಂಸ್ಕೃತಿಗಳಿಗೆ ಹೊಸಜೀವ ಬಂದಂತೆ ಕನ್ನಡ ಸಾಹಿತ್ಯಕ್ಕೂ ಹೊಸಜೀವ ಬಂತು, ಹೊಸ ಸ್ಫೂರ್ತಿ ಬಂತು.

"ಬಸವಣ್ಣನವರು ಜೇಡರ ದಾಸಿಮಯ್ಯಾದಿಗಳು ಅವಲಂಬಿಸಿದ ವಚನ ಪದ್ಧತಿಯನ್ನೇ ಅನುಸರಿಸಿ ತಮ್ಮ ಷಟ್ಸ್ಥಲ ವಚನ, ಕಾಲಜ್ಞಾನ ವಚನ, ಮಂತ್ರಗೋಪ್ಯ, ಶಿಖಾರತ್ನ ವಚನಾದಿ ಗ್ರಂಥಗಳನ್ನು ರಚಿಸಿದರು. ಹೊಸ ಛಂದಸ್ಸು ಹೊಸ ಭಾಷೆಯನ್ನು ಹುಡುಕುವ ವ್ಯವಧಾನ ಬಸವಣ್ಣನವರಿಗಿರಲಿಲ್ಲ. ಪ್ರಸಾರದಲ್ಲಿದ್ದ ವಚನ ರೀತಿಯು ಸರ್ವಜನಾದರಣೀಯವಾಗಿಯೂ ಸರ್ವರಿಗೂ ಸುಲಭಗ್ರಾಹ್ಯವಾಗಿಯೂ ಇದ್ದುದರಿಂದ ಅದನ್ನೇ ಬಳಸಿಕೊಂಡರು. ಬಸವಣ್ಣನವರು ಸಾಹಿತ್ಯವನ್ನು ಸೃಷ್ಟಿಮಾಡಲು ಹೊರಡಲಿಲ್ಲ, ಕಾವ್ಯಗಳನ್ನು ರಚಿಸಲಿಚ್ಛಿಸಲಿಲ್ಲ. ತಮ್ಮ ಆಧ್ಯಾತ್ಮಿಕ ಪ್ರಗತಿಯ ಕೋಟಲೆಗಳನ್ನು ಜನತೆಯ ಪ್ರಯೋಜನಕ್ಕಾಗಿ ನುಡಿಯುತ್ತ ಹೋದರು. ಅವರ ವಚನಗಳು ಅವರ ಆತ್ಮತೇಜಸ್ಸಿನ ಕುರುಹುಗಳು; ಅವರ ಜೀವನದ ಮಹಾಪ್ರಭೆಯ ಕಣಗಳು; ಅವರ ಪ್ರಗತಿಯ ಹಂತಗಳು. ಅಂತೇ ಅವುಗಳಲ್ಲಿ ಸಾಹಿತ್ಯದ ಎಲ್ಲ ಲಕ್ಷಣಗಳೂ ಕೂಡಿಕೊಂಡಿವೆ." *

ಅವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಮಹಾದೇವಿಯಕ್ಕ, ಚನ್ನಬಸವಣ್ಣ, ಮಾಚಿದೇವ ಮೊದಲಾದ ವಚನಕಾರರು ಅನುಸರಿಸಿದರು. ದಿವಂಗತ ರಾವ್‌ಬಹದ್ದೂರ್ ರಾ. ನರಸಿಂಹಾಚಾರ್ಯರು ಹೇಳುವಂತೆ

---

* ವೀರಶೈವ ಸಾಹಿತ್ಯ (ಲೇಖನ) ಅ. ನ. ಕೃಷ್ಣರಾಯ. "ಶರಣ ಸಾಹಿತ್ಯ" ಸಂ. ೧ ಸಂ. ೩, ಪುಟ ೧೯೦.

"ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದ ವೀರಶೈವರು ಮತಗ್ರಂಥಗಳನ್ನು ಕನ್ನಡದಲ್ಲಿಯೇ ಬರೆದುದರಿಂದ ಈ ಭಾಷೆಯ ಅಭಿವೃದ್ಧಿಗೆ ಹೆಚ್ಚು ಅವಕಾಶವುಂಟಾಯಿತು."

ಬಸವಣ್ಣನವರು ಮೂಡಿದ ಸಾಹಿತ್ಯ ಹಾಗೂ ವಿಚಾರಸ್ವಾತಂತ್ರ್ಯವು ಮುಂದೆ ಸತ್ಫಲಗಳನ್ನು ನೀಡಿತು. ಹರಿಹರ, ರಾಘವಾಂಕ, ಚಾಮರಸ, ಸರ್ವಜ್ಞಾದಿ ಕವಿಗಳು ರಗಳೆ, ಷಟ್ಪದಿ, ತ್ರಿಪದಿ ಮೊದಲಾದ ಕನ್ನಡ ಛಂದಸ್ಸುಗಳನ್ನು ವಿಶೇಷ ಪ್ರಚಾರಕ್ಕೆ ತಂದು ಸಾಹಿತ್ಯವನ್ನು ಜನತೆಯ ಹೃದಯಸಮೀಪಕ್ಕೆ ಒಯ್ದರು. ಬಸವೇಶ್ವರನ, ಶಿವಶರಣರ ಪುಣ್ಯಕಥೆಗಳನ್ನು ಸಾರುವ ಹಲವು ಪುರಾಣ, ಸಾಂಗತ್ಯ, ರಗಳೆಗಳು ಹುಟ್ಟಿಕೊಂಡವು. ಪುರಾಣ ಚಂಪೂಕಾವ್ಯಗಳ ಚರ್ವಿತಚರ್ವಣದಿಂದ ಬೇಸರಗೊಂಡಿದ್ದ ಕನ್ನಡಿಗರಲ್ಲಿ ಅರುವತ್ತುಮೂರು ಪುರಾತನರ ಚರಿತ್ರೆ, ಬಸವಾದಿ ಪ್ರಮಥರ ಚರಿತ್ರೆಗಳು ಹೊಸ ವಸ್ತು, ವಿಷಯ, ಪ್ರತಿಪಾದನೆಗಳಿಂದ ಹೊಸ ಅಭಿರುಚಿಯನ್ನು ಹುಟ್ಟಿಸುವುದಕ್ಕೆ ನೆರವಾದವು.

ದೇಶದ ಸರ್ವತೋಮುಖವಾದ ಪ್ರಗತಿಯ ಕಡೆಗೆ ಲಕ್ಷ್ಯವಿಟ್ಟುದೇ ಬಸವಣ್ಣನವರ ಹೆಚ್ಚುಗಾರಿಕೆ. ಜೀವನ್ಮುಕ್ತರೂ ಸಹಜಕವಿಗಳೂ ಆಗಿದ್ದಂತೆ ಅವರು ಉಗ್ರ ಸಮಾಜಸುಧಾರಕರೂ, ರೂಢಿಮೌಢ್ಯದ ಪ್ರಬಲ ವಿರೋಧಿಗಳೂ ಆಗಿದ್ದರು. ಕಾಯಕದ ಮನ್ನಣೆ, ಅಸ್ಪೃಶ್ಯೋದ್ಧಾರ, ಸ್ತ್ರೀ ಸಮಾಜದ ಉನ್ನತಿ, ಏಕದೇವಪೂಜೆ, ಸಮಾನಧರ್ಮ ಸ್ಥಾನಗಳನ್ನು ಆಚರಿಸಿ ಬೋಧಿಸಿದರು. ಶಾಂತಿ, ಸೌಹಾರ್ದ, ಪ್ರೇಮ, ಜೀವಕರುಣೆಗಳನ್ನು ಸಾರಿ ವಿಶ್ವಮೈತ್ರಿ, ವಿಶ್ವಶಾಂತಿ, ವಿಶ್ವಪ್ರೇಮಗಳ ಬುನಾದಿಯನ್ನು ಭದ್ರಪಡಿಸಿದರು.

"ದಯವಿಲ್ಲದ ಧರ್ಮವಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯ, ಕೂಡಲ ಸಂಗಮ ದೇವರಂತಲ್ಲದೊಲ್ಲನಯ್ಯ" ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ಇಂತಹ ವಿಶ್ವವಿಭೂತಿಗಳು ಕನ್ನಡನಾಡಿನವರೆಂದು ನಾವು ಹೆಮ್ಮೆಪಟ್ಟುಕೊಂಡು ಅವರ ಜಯಂತಿಯನ್ನು ಆಚರಿಸುವುದರಲ್ಲಿ ಅಚ್ಚರಿಯೇನು?

ಕನ್ನಡ ನುಡಿ. ೨೮-೪-೩೯

———

## ೨೭. ಶ್ರೀ ಕಡಪಾ ರಾಘವೇಂದ್ರರಾಯರ ಪುಣ್ಯದಿನ

ಇದುವರೆಗೆ ಧಾರ್ಮಿಕ ಕ್ಷೇತ್ರದಲ್ಲಿ ಹೆಸರಾದವರ ಪುಣ್ಯದಿನ ಜಯಂತಿಗಳನ್ನಾಚರಿಸುವ ವಾಡಿಕೆಯಿತ್ತು. ಆದರಿಂದು ಕಡಪಾ ರಾಘವೇಂದ್ರ ರಾಯರಂತಹ ಮಹಾ ಪುರುಷರ ಪುಣ್ಯ ದಿನವನ್ನು ಕರ್ನಾಟಕದ ಅನೇಕ ಮಹಾಪಟ್ಟಣಗಳಲ್ಲಿ ಆಚರಿಸುತ್ತಿರುವುದು ತುಂಬ ಅಭಿಮಾನಾಸ್ಪದವಾಗಿದೆ. ಬಂಗಾಳ, ಮಹಾರಾಷ್ಟ್ರ, ತೆಲುಗು ದೇಶಗಳಲ್ಲಿ ಈಗಾಗಲೇ ರಾಜಾರಾಮ ಮೋಹನರಾಯ್, ಲೋಕಮಾನ್ಯ ತಿಲಕ್, ವೀರೇಶಲಿಂಗಂ ಪಂತುಲು ಮೊದಲಾದ ಸಮಾಜಧುರೀಣರ ಜಯಂತ್ಯುತ್ಸವಗಳನ್ನು ಆಚರಿಸುವ ಪರಿಪಾಠ ಬಂದಿದೆ. ಕರ್ನಾಟಕವು ಹಿಂದೆ ಬೀಳದೆ ಕಡಪಾರಾಯರ ಜಯಂತಿಯಿಂದ ಈ ಪದ್ಧತಿಯನ್ನು ಆರಂಭಿಸುವುದು ಯುಕ್ತವಾಗಿದೆ.

ಕರ್ನಾಟಕ ಪ್ರಾಂತ್ಯ, ಕರ್ನಾಟಕ ವಿಶ್ವವಿದ್ಯಾನಿಲಯಗಳ ಪ್ರಶ್ನೆಗಳ ಬಗ್ಗೆ ಇಂದಿರುವಷ್ಟಾದರೂ ಸಹೃದಯತೆ ಬರಬೇಕಾದರೆ ಶ್ರೀ ಕಡಪಾ ಅವರ ಪ್ರಯತ್ನವೇ ಮೂಲ ಕಾರಣ. ನಮಗೆ ತಿಳಿದಂತೆ ಈಗ ೧೦-೧೨ ವರ್ಷಗಳ ಹಿಂದೆ ಶ್ರೀಯುತರು ಮೈಸೂರಿಗೆ ಬಂದು ಇಲ್ಲಿನ ರಾಜಕೀಯ ಮುಂದಾಳುಗಳನ್ನು ಕಂಡು ಕರ್ನಾಟಕದ ಭವಿಷ್ಯದ ಬೆನ್ನುಮೂಳೆಯಂತಿರುವ ಈ ವಿಷಯವನ್ನು ಪ್ರಸ್ತಾಪಿಸಿದರು. ಆದರೆ ಅಂದಿನ ಮುಂದಾಳುಗಳಲ್ಲಿ ಒಬ್ಬರಾಗಿದ್ದ ಕೀರ್ತಿಶೇಷ ಅತ್ತಿಗುಪ್ಪೆ ಕೃಷ್ಣಶಾಸ್ತ್ರಿಗಳನ್ನುಳಿದು ಬೇರೆ ಯಾರೂ ಇದರ ಮಹತ್ವವನ್ನು ಗ್ರಹಿಸಲಿಲ್ಲ. (ಇಂದಾದರೂ ಗ್ರಹಿಸಿದ್ದಾರೆಯೋ ?) ತಮ್ಮ ಅಮೋಘವಾದ ಪಾಂಡಿತ್ಯ, ನಿರರ್ಗಳವಾದ ವಾಗ್ಝರಿ, ಬಹುಭಾಷಾ ನಿಪುಣತೆ, ಸಾಂತಃಕರಣ, ಉಜ್ವಲವಾದ ಕನ್ನಡ ಅಭಿಮಾನಿಗಳಿಂದ ರಾಯರು ಕನ್ನಡನಾಡಿನಲ್ಲಿ ಕ್ರಾಂತಿಬೀಜವನ್ನು ಬಿತ್ತಿದರು. ಭೀಮಕಾಯ್ಯ, ಕೃಷ್ಣವರ್ಣ, ಬೃಹಸ್ಪತಿಯ ಮೇಧಾಶಕ್ತಿಯುಳ್ಳ ರಾಯರು ಮೇಜಿನ ಮೇಲೆ ಪದ್ಮಾಸನ ಹಾಕಿ ಕುಳಿತು 'ಭಗವಾನ್ ಉವಾಚ' ವನ್ನು ಅಂದಿನ ಭಾರತೀಯ ರಾಜಕೀಯ, ಸಾಮಾಜಿಕ, ನೈತಿಕ ಪರಿಸ್ಥಿತಿಗಳಿಗೆ ಹೋಲಿಸಿ ಹೇಳುತ್ತಿದ್ದ ರೀತಿ ಇಂದಿಗೂ ನಮ್ಮ ಕಿವಿಯಲ್ಲಿ ಧ್ವನಿತವಾಗುತ್ತಿದೆ. ರಾಯರ ಕರ್ಮಭೂಮಿಯಾಗಿದ್ದ ಅದೇ 'ಗಾಂಧಿ

ಮೈದಾನ' (ಈಗ ಕನ್ನಡ ಸಾಹಿತ್ಯ ಪರಿಷನ್ಮಂದಿರವಿರುವ ಸ್ಥಾನ) ಅದೇ 'ಅಭೀಃ' ಮಂತ್ರದ ರಣಧ್ವನಿ - ಆದರೆ ಆ ಪಾಂಚಜನ್ಯದ ಪ್ರಭುವು ನಮ್ಮಿಂದ ಮಾಯವಾಗಿ ಬಿಟ್ಟಿದ್ದಾನೆ. ಕನ್ನಡಿಗರು ಅತಿಭಯಂಕರ ರಾಗಬೇಕೆಂದು ಸಾರಿದ ರಾಘವೇಂದ್ರರಾಯರ ಪುಣ್ಯಸ್ಮೃತಿಯೊಂದೇ ಇಂದು ನಮ್ಮ ಸೊತ್ತು.

ಇಂದು ಅ-ನಾಯಕವಾಗಿರುವ ಕರ್ಣಾಟಕಕ್ಕೆ ಕಡಪಾರಾಯರ ಜೀವನವು ಧೃವತಾರೆಯಂತಾಗಬೇಕು. ಅವರ ಧೃತಿ, ಮತಿ ನಮ್ಮ ಗತಿಯಾಗಬೇಕು. ಕರ್ನಾಟಕವು ಒಂದಾಗಬೇಕು. ಕರ್ನಾಟಕ ಮಂತ್ರವು ಕೀರ್ತಿಕಾಮಿಗಳ ಸೊತ್ತಾಗದೆ ತ್ಯಾಗಿಗಳ ತುತ್ತಾಗಬೇಕು. ಆಗಲೇ ಕಡಪಾ ರಾಘವೇಂದ್ರರಾಯರ ಪವಿತ್ರಾತ್ಮನಿಗೆ ಶಾಂತಿ !

ಕನ್ನಡ ನುಡಿ ೧೦-೨-೩೯

---

## ೨೮. ಹಿರಿಯ ಕವಿಗಳ ನಾಮಸ್ಮರಣೆ

ಕನ್ನಡಿಗರಲ್ಲಿ ಸುಪ್ತವಾಗಿದ್ದ ದೇಶಪ್ರೇಮವನ್ನು ಸಾಹಿತ್ಯದಲ್ಲಿ ಮೊದಲು ಹೊರ ಹೊಮ್ಮಿಸಿದವರು ಶಾಂತಕವಿಗಳು. ಇವರ ಸ್ಮಾರಕಾರ್ಥ ವಾಗಿ ಯಾವ ತಕ್ಕ ಪ್ರಯತ್ನವೂ ಕನ್ನಡ ನಾಡಿನಲ್ಲಾಗದಿರುವುದು ಶೋಚನೀಯ. ರಾಷ್ಟ್ರದ ದೀವಿಗೆಯಂತೆ ಬೆಳಗಿದ ಈ ಹಿರಿಯ ಕವಿಗಳನ್ನು ಸ್ಮರಿಸುವುದೂ, ಅವರ ಹೆಸರು ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡು ವುದೂ ಜನತೆಯ ಕರ್ತವ್ಯ. ಸೋದರ ಪ್ರಾಂತಗಳು ತಮ್ಮ ಕವಿಗಳ ಬಗ್ಗೆ ತೋರುತ್ತಿರುವ ಆದರ ಗೌರವಗಳನ್ನು ಕನ್ನಡ ನಾಡವರು ತಮ್ಮ ಕವಿಗಳ ಬಗ್ಗೆ ತೋರಬೇಕು. (ಇಕ್ಬಾಲ್ ಮತ್ತು ಭಾರತೀಯವರ ಸ್ಮಾರಕೋತ್ಸವಗಳನ್ನು ಬಂಗಾಳ, ತಮಿಳುನಾಡು, ವಿಶೇಷ ವೈಭವದಿಂದ ಆಚರಿಸಿ ಅವರ ಕೃತಿಪರಿಚಯವನ್ನು ಜಗತ್ತಿಗೆ ಮಾಡಿಕೊಟ್ಟಿವೆ.) ಶಾಂತ ಕವಿಗಳ ಬಗ್ಗೆ ಇಂತಹ ಪ್ರಯತ್ನ ಬೇಗ ಆರಂಭವಾಗಿ, ಅವರ ಕೃತಿಗಳು ಎಲ್ಲರ ಕೈಸೇರುವಂತಾಗಬೇಕು. ಸ್ಮಾರಕೋತ್ಸವ ಕನ್ನಡನಾಡಿನ ಎಲ್ಲೆಡೆ ಯಲ್ಲಿಯೂ ವೈಭವದಿಂದ ಜರುಗಬೇಕು.

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೩೦ ಸಂ. ೨

---

# ೨೯. ಕೈಲಾಸಂ

೧೯೪೪ನೆಯ ಇಸವಿ. ದೇಶೀಯ ವಿದ್ಯಾಶಾಲೆಯ ವಿಶಾಲ ಪ್ರಾಂಗಣ. ಐದು ಆರು ಸಾವಿರ ಜನಸಂದಣಿ. ಗಾಂಧಿ, ನೆಹರು, ಅಜಾದ್ ಯಾರಾದರೂ ಬಂದಿದ್ದಾರೆಯೋ? ಎಂದು ಜನ ಕೇಳಿದರು. ಇಲ್ಲ-ಕನ್ನಡ ನಾಟಕಕಾರ ಕೈಲಾಸಂನ ೫೯ನೆಯ ಹುಟ್ಟಿದ ದಿನವದು.

೧೯೪೫ನೆಯ ಇಸವಿ. ಆಗಸ್ಟು ತಿಂಗಳು. ಅದೇ ಸ್ಥಳ. ಒಂದು ವಾರ ಕೈಲಾಸಂ ಉತ್ಸವ. ಜನತೆಯಲ್ಲಿ ಅಷ್ಟೇ ಉತ್ಸಾಹ. ಅಕ್ಟೋಬರ್ ತಿಂಗಳು–ಮದರಾಸಿನ ಸಮ್ಮೇಳನಕ್ಕೆ ಕೈಲಾಸಂ ಅವರು ಅಧ್ಯಕ್ಷರಾಗಿ ಆಯ್ಕೆಯಾದರು.

ಈ ದಿನಗಳನ್ನು ಕಾಣಬೇಕಾದರೆ ಕೈಲಾಸಂ ಕಾಲು ಶತಮಾನ ಕಾಯಬೇಕಾಯಿತು. ೧೯೨೨ರಲ್ಲಿ ಅವರ 'ಟೊಳ್ಳು-ಗಟ್ಟಿ' ಪ್ರಕಟವಾಯಿತು. ಅಲ್ಲಿಂದ ೨೧ ವರ್ಷಗಳಲ್ಲಿ ಅಚ್ಚುಕಂಡದ್ದು ಅವರ ೩-೪ ಕೃತಿಗಳು. ೧೯೪೪ರಲ್ಲಿ ಮಾಧವ ಸನ್ಸ್ ಕಂಪನಿಯ ವಿಶ್ವಾಸದಿಂದ ಕೈಲಾಸಂ ಕೃತಿಗಳು ಪುಂಖಾನುಪುಂಖವಾಗಿ ಬರಲಾರಂಭಿಸಿದವು.

ಕಾಲು ಶತಮಾನ ಕೀರ್ತಿಯನ್ನು ಆಶಿಸದೆ, ಹಣದ ಬೆನ್ನುಹತ್ತದೆ ನಿಶ್ಶಬ್ದವಾಗಿ ಸಾಹಿತ್ಯದೇವಿಯ ಆರಾದನೆ ಮಾಡಿದವರು ಕೈಲಾಸಂ. ಈ ಕಾಲದಲ್ಲಿ ಕನ್ನಡ ಸಾಹಿತ್ಯ ಸಾಗರದ ಮೇಲೆ ಹಲವು ಜೊಂಡು, ಕಪ್ಪೆಯ ಚಿಪ್ಪುಗಳು ತೇಲಿಹೋದವು. ಗಟ್ಟಿಯಾಗಿ ನಿಂತವರು ಕೈಲಾಸಂ.

ಕೈಲಾಸಂ ಮತ್ತು ಅವರ ಕೃತಿಗಳ ಬಗ್ಗೆ ಕನ್ನಡ ಸಾಹಿತ್ಯ ಪಂಡಿತರೂ, ಆಚಾರ್ಯ ಪುರುಷರೂ ತೋರಿದ ಅನಾದರತೆಯ ಕಾರಣವನ್ನು ಸರ್ ರಾಧಾಕೃಷ್ಣನ್ ಅವರ ಮಾತುಗಳಲ್ಲಿ ಹೇಳಬಹುದು.

"Unfortunately in our country official position or a place in the university seems to be necessary for literary recognition, Kailasam cannot lay claim to either. He rather illustrates the tradition that abuse, criticism, exile and fierce solitariness, mask the man of genius."

ಕೈಲಾಸಂ ನಾಟಕಕಲೆಯನ್ನವಲಂಬಿಸದೆ ಸರ್ಕಾರಿ ನೌಕರಿಯನ್ನು ಅವಲಂಬಿಸಿದ್ದರೆ ಈಗವರಿಗೆ ೫೦೦ ರೂ. 'ಪೆಂಚನ್' ಬರುತ್ತಿತ್ತು. ಹುಟ್ಟಿದ್ದು ಶ್ರೀಮಂತ ಕುಟುಂಬದಲ್ಲಿ; ಶಿಕ್ಷಣ ಆರು ವರ್ಷ ವಿಲಾಯತಿಯಲ್ಲಿ; ಸೇರಿದ್ದು ಭೂಗರ್ಭಶಾಸ್ತ್ರ ಇಲಾಖೆಯ ಅಧಿಕಾರಿಗಳಾಗಿ. ಆದರೆ ಕೈಲಾಸಂ ಆರಿಸಿದ್ದು ತಿರುಳ್ಗನ್ನಡ ತಿರುಕನ ಬಾಳು. ಬಂಗಲೆ-ಸಂಸಾರ ಅಧಿಕಾರ-ಸಂಪತ್ತು-ಮೋಟಾರು ವಾಹನ-ಕೈಗೊಂದು ಕಾಲಿಗೊಂದು ಆಳು ಇಟ್ಟುಕೊಂಡು ಅವರು ಬಾಳಿ ಬದುಕಿ ವಿಶ್ರಾಮವೇತನ ಪಡೆದು ಸಾವಿರ ಸರ್ಕಾರದ ಗುಲಾಮರಲ್ಲಿ ಒಬ್ಬರಾಗಿ ಹೋಗಬಹುದಾಗಿತ್ತು. ಆದರೆ ಅವರಿಗೆ ಪ್ರಿಯವಾದದ್ದು ಟೊಳ್ಳು ಗಟ್ಟಿಯ ಮಧುರ ಬಾಳುವೆ; ಬಡತನ ಸಿರಿತನಗಳು ಮನಸ್ಸಿನ ಪ್ರತೀಕಗಳೆಂಬ ಆತ್ಮಜ್ಞಾನ; ನಾಟಕವಾಡಿ, ಆಡಿಸಿ, ಊರೂರು ತಿರುಗಿ ತೋರಿಸಿ, ಕಲಿಸಿ ಕಲಿತು ಬಾಳ ಕೊಡವನ್ನು ಅನುಭವದಿಂದ ತುಂಬುವ ರಸಜೀವನ. ಕೈಲಾಸಂ ಪೂರ್ತ ಹೆಸರು ತ್ಯಾಗರಾಜ ಕೈಲಾಸಂ. ಹಿರಿಯರು ತಿಳಿದೇ ಈ ಭರತಮುನಿಯನ್ನು ತ್ಯಾಗರಾಜನೆಂದು ಕರೆದಿರಬೇಕಲ್ಲವೇ ?

ಕೈಲಾಸಂ ಕೃತಿಗಳು ಈವರೆಗೆ ಕನ್ನಡದಲ್ಲಿ ಹದಿನೇಳು, ಇಂಗ್ಲೀಷಿನಲ್ಲಿ ಎರಡು ಪ್ರಕಟವಾಗಿವೆ. ಪ್ರಕಟವಾಗದೆ ಉಳಿದಿರುವವು, ಅರ್ಧ ಮುಗಿದು ಕುಳಿತಿರುವವೇ ಹೆಚ್ಚು. ದೊರೆಯುವ ೧೯ ಕೃತಿಗಳೇ ಸಾಕು ಕೈಲಾಸಂ ಅವರ ಪ್ರತಿಭೆಗೆ ನಿದರ್ಶನ. ಕೈಲಾಸಂ ಅವರದು ತಾತ್ವಿಕನ ಮನಸ್ಸು; ನಗೆಗಾರನ ದಾರಿ. ಅವರನ್ನು ಹೋಲಿಸಬಹುದಾದರೆ ಗ್ರೀಕರ ಅರಿಸ್ಟೋಫೇನಸ್ಸಿಗೆ ಹೋಲಿಸಬಹುದು. ಎಲ್ಲಿಯೂ ತತ್ವ ಬಿಚ್ಚಿಹೇಳಿ ಕೈಲಾಸಂ ಬೇಸರಿಸುವುದಿಲ್ಲ. ಹಾಲಿನಲ್ಲಿ ಸಕ್ಕರೆ ಬೆರತಂತೆ ನಗೆಯಲ್ಲಿ ತತ್ವ, ಉಪದೇಶ ಬೆರೆಯುತ್ತದೆ. ಸದಾ ಅಳುಮೋರೆ ಹಾಕುವ ನಮ್ಮ ಜನ ನಾಲ್ಕು ನಿಮಿಷ ನಕ್ಕರೆ ಸಾಕು ನಾನು ಧನ್ಯ ಎಂದು ಕೈಲಾಸಂ ಭಾವಿಸುತ್ತಾರೆ. ಆ ನಗೆ ಆತ್ಮೋತ್ಕ್ರಾಂತಿಯ ಪರಮಮಾರ್ಗ. ಕಿಟ್ಟಿ, ನಾಗತ್ತೆ, ಮುಮ್ಮಣಿ, ನರಸಿಂಹಯ್ಯ, ರಾಮಣ್ಣ ಮೊದಲಾದ ಪಾತ್ರಗಳಲ್ಲಿ ನೋಡಬೇಕು ಕೈಲಾಸಂ ಅವರ ಸರ್ವತೋಮುಖ ಹಾಸ್ಯವಿನ್ಯಾಸ. ಆಕ್ಷೇಪ, ಹಾಸ್ಯ, ಅಣಕ, ಕಟುಮಾತು, ಚತುರೋಕ್ತಿ, ಅನ್ಯೋಕ್ತಿ ಎಲ್ಲಾ ಅವರ

ಕರತಲಾಮಲಕ. ಮನುಷ್ಯನ ಮನಸ್ಸು ಎಷ್ಟು ಸೂಕ್ಷ್ಮ, ಎಷ್ಟು ಸಂಧಿಗ್ಧಮಯ ಎಂಬುದರ ಪೂರ್ಣ ಪರಿಜ್ಞಾನ ಯಾರಿಗೂ ಇಲ್ಲ. ಸಾಕ್ರೆಟಿಸ್, ನಚಿಕೇತರಿಂದ ಫ್ರಾಯ್ಡ್, ಷಾನವರೆಗೆ ಎಲ್ಲರೂ ಅದರಲ್ಲಿ ಶೋಧ ನಡೆಸಿದವರೇ. ವಿಜ್ಞಾನಿ ಕೈಲಾಸಂ ಅವರ ಶೋಧ ನಮ್ಮ ತಿಳಿವನ್ನು ಬಹಳ ಮುಂದಕ್ಕೊಯ್ದಿದೆ.

ಐರ್ಲೆಂಡಿನ ನವೋದಯದ ಕತೆ ಹೇಳುವವರು ನಾಟ್ಯಕಾರ ಸಿಂಜ್, ಕವಿ ಎ. ಐ. ಅವರಿಗೆ ಬಹಳ ಬೆಲೆ ಕೊಡುತ್ತಾರೆ. ಸಿಂಜ್, ಎ. ಐ. ಐರಿಷ್ ಸಾಹಿತ್ಯಕ್ಕೆ ಜೀವನಸಾಮಿಪ್ಯ ತಂದುಕೊಟ್ಟರು. ಜನತೆಯ ನಡತೆ, ಪದ್ಧತಿ, ಆಚಾರ ವಿಚಾರ, ನುಡಿಹಿಡಿ, ಗಾದೆ, ಕತೆಗಳನ್ನು ಸಾಹಿತ್ಯಕ್ಕೆ ಅಳವಡಿಸಿದರು. ಅಚ್ಚ ಐರಿಷ್ ಸಾಹಿತ್ಯದ ನಿರ್ಮಾಪಕರಾದರು. ಆ ಕೆಲಸ ಕನ್ನಡದಲ್ಲಿ ಆಗಿದ್ದರೆ ಕೈಲಾಸಂ ಅವರಿಂದಲೇ. ಆಧುನಿಕ ಕನ್ನಡ ಸಾಹಿತ್ಯಾಚಾರ್ಯಪದವಿಗೆ ಅಧಿಕಾರಿಗಳು ಕೈಲಾಸಂ ಅವರೊಬ್ಬರೇ.

ಕೈಲಾಸಂ ಕೃತಿ ಅವರ ಹೃದಯದ ಪಡಿಯಚ್ಚು. ಅಹಂಕಾರ, ಪ್ರತಿಷ್ಠೆ, ದೊಡ್ಡಸ್ತಿಕೆ ಶಬ್ದಗಳು ಅವರ ಕೋಶದಲ್ಲಿಲ್ಲ. ಪಂಡಿತ, ಪಾಮರ, ಶ್ರೀಮಂತ, ಬಡವ ಎಂಬ ವ್ಯತ್ಯಾಸವನ್ನು ಅವರು ಕಂಡರಿಯರು. ನೊಂದ ಬಾಳಿಗೆ ನಗೆಯ ಕಿರಣದ ಚಿಕಿತ್ಸೆ ಮಾಡಲು ಕೈಲಾಸಂ ಸದಾಸಿದ್ಧ. ಅವರ ಅಸೀಮ ಅಂತಃಕರಣ ಪ್ರತಿಯೊಂದು ಕೃತಿಯಲ್ಲಿ ನುಡಿಯಲ್ಲಿ ಎದ್ದು ಕಾಣುತ್ತದೆ.

ಸ್ವಾತಂತ್ರ್ಯ ಆಗಸದ ಈ ಹೂವಾಹಕ್ಕಿ ಇಂದು ಕನ್ನಡಿಗರ ಪ್ರೇಮದ ಬಲೆಗೆ ಬಿದ್ದಿದೆ. 'ಈ ಅಧ್ಯಕ್ಷಸ್ಥಾನಗೀನ ನನಗೇಕೆ' ಎಂದು ಕೈಲಾಸಂ ಮೂಗೆಳೆದರು. ಆದರೆ ಕನ್ನಡ ಜನ ಕೈಲಾಸಂ ಅವರನ್ನು ಬಿಡಲು ಸಾಧ್ಯವೇ?

ಅರವತ್ತು ದಾಟಿ ನಿಂತಿದ್ದಾರೆ ಅಜ್ಜೇಯ ಕೈಲಾಸಂ. ಅವರು ನೂರು ದಾಟಿ ನಿಲ್ಲಲಿ. ಅವರ—ನಮ್ಮ—ಎಲ್ಲ ಭಾರತೀಯರ ಕಣ ಸಾಗಿರುವ 'ಸ್ವತಂತ್ರ ಭಾರತ' ದಲ್ಲಿ ನಾವು ಮೆರೆಯುವ ದಿನ ಬೇಗ

ಬರಲಿ. ಇಂದು ಕನ್ನಡಿಗರು ಕನ್ನಡಕ್ಕೊಬ್ಬನೇ ಕೈಲಾಸಂ ಎಂದು ತಿಳಿದಿರುವಂತೆ ಆಗ ಭಾರತೀಯರು 'ಭಾರತಕ್ಕೊಬ್ಬನೇ ಕೈಲಾಸಂ' ಎಂದು ತಿಳಿಯಲು ಸಾಧ್ಯವಾಗುತ್ತದೆ.

ಪ್ರಗತಿ ಸಂ ೧. ಸಂ ೩.

---

## ೩೦. ಆಚಾರ್ಯ 'ಶ್ರೀ' ಅವರು

ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಮದರಾಸಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕಳುಹಿಸಿಕೊಟ್ಟ ಹಾರೈಕೆಯಲ್ಲಿ 'ಶ್ರೀಯೆಂಬೊನೊರ್ವನ್‌ ಅಡಿಯೆನೆನ್‌ ಕಾಯೆಂದು ಬೇಳ್ಪನ್‌ ಪರಮಾತ್ಮನನ್‌' ಎಂದು ನುಡಿದಾಗ ನಮ್ಮೆಲ್ಲರ ಮನ ಮಿಡುಕಿತು. ಸಮ್ಮೇಳನ ಕಾಲದಲ್ಲಿ ಕನ್ನಡ ಬಾವುಟದ ಕಂಬ ಮುರಿದು ಬಿತ್ತೆಂಬ ಸುದ್ದಿ ಕೇಳಿದ ಮೇಲಂತೂ ವ್ಯಾಕುಲ ಇಮ್ಮಡಿಸಿತು. ಈ ಸೂಚನೆಗಳು ನಿಜವೆನಿಸುವಂತೆ ಬಂತು ಸುದ್ದಿ—ಆಚಾರ್ಯ ಶ್ರೀಯವರ ಪರಮಶಾಂತಿ. ಕನ್ನಡ ಬಾವುಟದ ಆಧಾರ ಕಂಬ ಮುರಿದು ಬಿತ್ತು!

ಕನ್ನಡಕ್ಕಾಗಿಯೆ ಒಂದು ಜೀವಮಾನವನ್ನೇ ಸವೆಸಿದ ಮಹಾನುಭಾವರು ಶ್ರೀಯವರು. ಇಂಗ್ಲೀಷ್, ಗ್ರೀಕ್, ತಮಿಳು, ತೆಲುಗು, ಕನ್ನಡ ಸಾಹಿತ್ಯ ಭಂಡಾರವನ್ನೊಡೆದು ಮನೆಮನೆಗೆ ಬೀರಿದರು. ಪ್ರತ್ಯಕ್ಷವಾಗಿ ಹಲವು ಯೋಗ್ಯ ಶಿಷ್ಯರನ್ನು ದೊರಕಿಸಿಕೊಂಡು ಅವರನ್ನು ಕನ್ನಡ ಸೇವೆಗೆ ಅಣಿ ಮಾಡಿದರು. ಪರೋಕ್ಷವಾಗಿ ನೂರಾರು ಜನ ಶಿಷ್ಯರನ್ನು ದೊರಕಿಸಿಕೊಂಡರು. ಶ್ರೀಯವರ ಪಾಂಡಿತ್ಯಕ್ಕೆ ಮರುಳಾಗದವರಿಲ್ಲ, ವಾಗ್ಮಿತೆಗೆ ತಲೆದೂಗದವರಿಲ್ಲ.

ಶ್ರೀಯವರು ಬರೆದದ್ದು ಬಹಳ ಸ್ವಲ್ಪ. ಇಂಗ್ಲಿಷ್ ಗೀತೆಗಳು, ಅಶ್ವತ್ಥಾಮನ್, ಪಾರಸಿಕರು ಮತ್ತು ಗದಾಯುದ್ಧ ನಾಟಕಗಳು, ಕೆಲವು ಸ್ವತಂತ್ರ ಗೀತೆಗಳು, ಕನ್ನಡ ಬಾವುಟ ಸಂಕಲನ, ಕೆಲವು ಮುನ್ನುಡಿಗಳು, ಉಪನ್ಯಾಸಗಳು. ಆದರೆ ಆ ಮಿತನಿರ್ಮಾಣದಲ್ಲಿಯೂ ತಮ್ಮ ಪಾಂಡಿತ್ಯ,

ರಸಿಕತೆ, ಕೆಚ್ಚು, ಕನ್ನಡತನವನ್ನು ಶ್ರೀಯುವರು ಅಚ್ಚೊತ್ತಿದ್ದಾರೆ. ಕೆಲಸ ದಿಂದ ನಿವೃತ್ತಿಹೊಂದಿದ ಮೇಲೆ ಕೆಲವು ಗ್ರಂಥಗಳನ್ನು ಬರೆಯುಬೇಕೆಂದು ಯೋಚಿಸಿದ್ದರು. ಧಾರವಾಡದ ಕರ್ನಾಟಕ ಶಿಕ್ಷಣ ಸಮಿತಿಯ ಕರೆಗೆ ಓಗೊಟ್ಟು ಅಲ್ಲಿಗೆ ತೆರಳಿ ಒಂದು ಕಾಲೇಜನ್ನು ನಡೆಸುವ ಗುರುತರ ಕಾರ್ಯ ಭಾರವನ್ನು ಹೊತ್ತರು. ಗ್ರಂಥನಿರ್ಮಾಣ ನಿಂತುಹೋಯಿತು. ಆದರೆ ಕನ್ನಡದ ತೇರು ಮುಂದೆ ಸಾಗಿತು.

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಶ್ರೀಯುವರು ಅಚ್ಚು ಕೂಟ, ಕನ್ನಡ ನುಡಿ ಪತ್ರಿಕೆಗಳ ಹುಟ್ಟಿಗೆ ಕಾರಣಕರ್ತರಾದರು. ಕನ್ನಡ ನಾಡನ್ನು ಹಲವು ಸಲ ಬಳಸಿ, ಹೋದಹೋದಲ್ಲಿ ಕನ್ನಡ ಬೆಳಕನ್ನು ಬೀರುತ್ತ ಬಂದರು. ಕನ್ನಡದ ಕರೆಯೆಂದರೆ ಶ್ರೀಯುವರಿಗೆ ದೇಹಾಲಸ್ಯ, ವಯಸ್ಸಿನ ಅಡ್ಡಿ ಆತಂಕಗಳೊಂದೂ ಗಮನಕ್ಕೇ ಬರುತ್ತಿರಲಿಲ್ಲ.

ಶ್ರೀಯುವರು ಸಂಪಾದಿಸಿದ್ದು ಕನ್ನಡಕ್ಕೆ ಮೀಸಲು. ಮೈಸೂರು ವಿಶ್ವವಿದ್ಯಾನಿಲಯಕ್ಕೆ, ಕನ್ನಡ ಸಾಹಿತ್ಯ ಪರಿಷತ್ತಿಗೆ ಹಲವು ದತ್ತಿಗಳನ್ನು ಒಪ್ಪಿಸಿದ್ದಾರೆ. ವಿದ್ಯಾರ್ಥಿಗಳಿಗೆ ಇವರು ಮಾಡಿರುವ ಉಪಕಾರಕ್ಕೆ ಲೆಕ್ಕವಿಲ್ಲ.

ಹಲವು ಸಲ ಕನ್ನಡನಾಡನ್ನು ಸುತ್ತಿ ಬೇರೆಬೇರೆ ಭಾಗಗಳ ಕಷ್ಟ ಸುಖಗಳನ್ನು ಶ್ರೀಯುವರು ಚೆನ್ನಾಗಿ ಅರಿತಿದ್ದುದರ ಫಲವಾಗಿ ಅವರ ಮನಸ್ಸಿನಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ಅನ್ಯಾದೃಶ್ಯ ಕಳಕಳಿ ಹುಟ್ಟಿತ್ತು. ಕಳೆದ ನಾಡಹಬ್ಬದಲ್ಲಿ ಗದುಗಿನಲ್ಲಿ ಆ ಬಗ್ಗೆ ವೀರಾವೇಶದಿಂದ ಮಾತನಾಡಿ ಅಲ್ಲಿನ ಕನ್ನಡಿಗರನ್ನು ಹೊಡೆದೆಬ್ಬಿಸಿದರು. ಕನ್ನಡನಾಡು ಒಂದಾಗಿ, ಒಂದೇ ಅಧಿಕಾರದ ಕೆಳಗೆ ಬರುವುದು ಭಾರತದ ಭವಿಷ್ಯತ್ತಿನ ದೃಷ್ಟಿಯಿಂದ ಅತ್ಯಗತ್ಯವೆಂಬುದು ಅವರ ಮನವರಿಕೆಯಾಗಿತ್ತು. ಕರ್ನಾಟಕ ಒಂದಾಗುವ ತನಕ ತಮಗೆ ಶಾಂತಿಯಿಲ್ಲವೆಂದು ಸಾರಿಸಾರಿ ಹೇಳಿದರು.

ಸರಸ್ವತಿಯ ರನ್ನಭಂಡಾರವನ್ನೊಡೆದ ಕವಿರನ್ನ ಇಂದು ಕಣ್ಮರೆಯಾದ. ಕನ್ನಡನಾಡಿನ ಹಿರಿಯ ತಪಸ್ವಿ ಇಂದು ನಮ್ಮಿಂದ ದೂರವಾಗಿದ್ದಾನೆ. ಆದರೆ ಆತನ ಕೃತಿ, ಸೇವೆ, ತ್ಯಾಗ ಅಜರಾಮರವಾಗಿ ಉಳಿಯುತ್ತದೆ.

ಗುರು ಶ್ರೀಯವರ ಪವಿತ್ರ ಸೇವೆಗೊಪ್ಪುವ ಸ್ಮಾರಕವೇರ್ಪಡಬೇಕು. ಕನ್ನಡ ಜನ ಒಂದಾಗಿ ಸ್ವತಂತ್ರ ಪ್ರಾಂತ್ಯವನ್ನು ದೊರಕಿಸಿಕೊಂಡರೆ ಅದೇ ಅವರಿಗೆ ಸಂಪ್ರೀತವಾಗುವ ಸ್ಮಾರಕ. ಈ ಗುರಿಯನ್ನು ಸಾಧಿಸುವುದಕ್ಕೆ ನೆರವಾಗುವಂತೆ ಕೆಲವು ಪ್ರಯತ್ನಗಳನ್ನು ಕೈಗೊಳ್ಳುವುದು ಯೋಗ್ಯ.

೧. ಶ್ರೀಯವರ ಲೇಖನಗಳು, ಭಾಷಣಗಳು, ಮುನ್ನುಡಿಗಳನ್ನು ಸಂಗ್ರಹಿಸಿ ಒಂದು ಗ್ರಂಥ ಪ್ರಕಟಿಸಬೇಕು.

೨. ಕನ್ನಡಶಿಲ್ಪಿಗಳಿಂದ ಮಾಡಿಸಿದ ಒಂದು ಅಮೃತಶಿಲಾ ಪ್ರತಿಮೆಯನ್ನು ಪರಿಷತ್ತಿನಲ್ಲಿ ಸ್ಥಾಪಿಸಬೇಕು.

೩. ಒಂದುಲಕ್ಷ ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ ಹಣ ಸಂಗ್ರಹಿಸಿ ಅದನ್ನು ಕನ್ನಡ ಪ್ರಸಾರಕ್ಕೂ, ಪ್ರಾಂತ್ಯನಿರ್ಮಾಣದ ಬಗ್ಗೆ ಕೈಗೊಳ್ಳಬೇಕಾದ ಕೆಲಸಕಾರ್ಯಗಳಿಗೂ ವಿನಿಯೋಗಿಸುವುದು.

೪. ಶ್ರೀಯವರ ಹೆಸರಿನಲ್ಲಿ ಪರಿಷತ್ತಿನಲ್ಲಿ ಒಂದು ಸಂಶೋಧನ ಶಾಖೆಯನ್ನು ಆರಂಭಿಸಿ ಸುಲಭ ಬೆಲೆಗೆ ಅಚ್ಚಾಗಿರುವ ಮತ್ತು ಅಚ್ಚಾಗದಿರುವ ಕನ್ನಡ ಕಾವ್ಯಗಳು ದೊರೆಯುವಂತೆ ಮಾಡುವುದು.

ಕನ್ನಡದ ಮಹಾವೀರನಿಗೆ ನಮ್ಮ ಅಶ್ರುತರ್ಪಣ ಸಲ್ಲದು ; ಸಾಲದು. ರಕ್ತತರ್ಪಣ ನೀಡಬೇಕು. ಕನ್ನಡ ನಾಡನ್ನು ಕಟ್ಟಿ, ಅದನ್ನು ಸ್ವತಂತ್ರ ಪ್ರಾಂತ್ಯವನ್ನಾಗಿ ಮಾಡುವ ಅವರ ಕನಸು ನನಸಾಗಬೇಕು. ಇದೇ ಶ್ರೀಯವರು ನಮ್ಮ ಪಾಲಿಗೆ ಬಿಟ್ಟುಹೋಗಿರುವ ಕೆಲಸ—ಶ್ರೀಯವರು ನಮ್ಮಿಂದ ಕೋರುವ – ಸ್ವೀಕರಿಸುವ ‘ ಗುರುಕಾಣಿಕೆ.’

ಗೆಳೆಯ ಕ. ವೆಂ. ರಾಘವಾಚಾರ್ಯರು ನುಡಿದಿರುವಂತೆ “ ಕನ್ನಡವೆ ತಾಯಾಗಿ ಕನ್ನಡವೆ ತವರಾಗಿ ಕನ್ನಡವೆ ಕನಸಾಗಿ ಕನ್ನಡವೆ ನನಸಾಗಿ ಕನ್ನಡವೆ ಕರ್ಮವಾಗಿ ಕನ್ನಡವೆ ಧರ್ಮವಾಗಿ ಬಾಳಿದ ಶ್ರೀಯವರು ಕನ್ನಡವೆ ಕಡೆ ನೆನಹಾಗಿ ಕಣ್ಮರೆಯಾದರು. ಅವರ ಮೈ ಮರೆಯಾಯಿತು, ನಿಜ. ಆದರೆ ಅವರ ಹೆಸರು ಹೊನ್ನಾಗಿ ಸಾವಿರಕಾಲ ಸಲ್ಲುತ್ತದೆ.”

ಎಂದಿನವರೆಗೆ ಕನ್ನಡನಾಡಿನಲ್ಲಿ ಪಾಂಡಿತ್ಯ, ತ್ಯಾಗ, ಸೇವೆ, ನಿಷ್ಠೆಗಳಿಗೆ ಬೆಲೆಯಿರುವುದೋ ಅಂದಿನವರೆಗೆ ಶ್ರೀಯವರ ಹೆಸರು ನಿಲ್ಲುತ್ತದೆ. ಅದೇ ಕನ್ನಡ ಮಕ್ಕಳ ಕೈಗಂಬ, ದಾರಿಬೆಳಕು.

ಪ್ರಗತಿ ಸಂ. ೧. ಸಂ. ೪

---

# ೩೧. ಕಿರಿಯ ಸಾಹಿತಿಗಳ ಮೇಲೆ ಹಿರಿಯರ ಕೊಡಲಿ

## ಸಾಹಿತ್ಯ—ಪ್ರಗತಿ

ಸಾಹಿತ್ಯವೆನ್ನುವುದು ಪ್ರಗತಿಗೆ ಸಾಧಕವಾಗಬೇಕು ಎಂಬುದನ್ನು ಕುರಿತು ಚರ್ಚೆ ನಡೆದಿದೆ. ಪ್ರಗತಿ ಎನ್ನುವುದಕ್ಕೆ ಏಕಮುಖವಾದ ಒಂದು ಅರ್ಥವನ್ನು ಇಟ್ಟುಕೊಂಡು ನಮ್ಮ ತರುಣಮಿತ್ರರು ಕೆಲವರು ನಮಗೆ ಇಂತಹ ಸಾಹಿತ್ಯ ಬೇಕು, ಇಂತಹ ಸಾಹಿತ್ಯ ಬೇಡ, ಎಂದು ಹೇಳುತ್ತ—ವಿಂಗಡಿಸಿದರು. ಇವರಲ್ಲಿ ಒಬ್ಬರು ಒಂದು ಸಭೆಯಲ್ಲಿ " ಸುಬ್ಬಣ್ಣ ಶ್ರೇಷ್ಠ ಕೃತಿ ; ಆದರೆ ನಮ್ಮ ಇಂದಿನ ಸ್ಥಿತಿಯಲ್ಲಿ ಇಂತಹ ಕೃತಿ ನಮಗೆ ಬೇಕಿಲ್ಲ. ಈ ತೆರದ ಬರವಣಿಗೆ ಈಗ ನಮಗೆ ಅಪ್ರಸ್ತುತ, ನಮಗೆ ಈಗ ಬೇಕಾಗಿರುವುದು ನಮ್ಮ ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ, ಎಂದು ಮೊದಲಾಗಿ ನಮಗೆ ಬೇಡದ ಸಾಹಿತ್ಯಕ್ಕೆ ಒಂದು ಉದಾಹರಣೆಯನ್ನು ಕೊಟ್ಟು ನಮಗೆ ಬೇಕಾದ ಸಾಹಿತ್ಯದ ಗುರಿಯನ್ನು ಸೂಚಿಸಿದರು.

## ಭಾವನೆ ಅನುಸರಿಸಿ ಬರೆದು ಸಾಹಿತ್ಯ ಬೆಳೆಸಿರಿ

ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ ಆವಶ್ಯಕ ಎನ್ನುವ ಬಗೆಗೆ ನಮ್ಮನಮ್ಮಲ್ಲಿ ಅಭಿಪ್ರಾಯ ಭಿನ್ನವಾಗುವುದಿಲ್ಲ. ಯಾವ ರೀತಿಯ ಬರವಣಿಗೆ ಸ್ವಾತಂತ್ರ್ಯವನ್ನು ಹೇಗೆ ಸಾಧಿಸುತ್ತದೆ, ನಾವು ಸಾಧಿಸಬೇಕಾದ ಸ್ವಾತಂತ್ರ್ಯದ ಸ್ವರೂಪವೇನು ಎಂಬ ವಿವರಗಳಲ್ಲಿ ಭಾವನೆಗಳು ಬೇರೆಯಾಗುವ ಸಂಭವಗಳಿವೆ. ಈ ವಿಚಾರವನ್ನು ನಾನು ಪ್ರಗತಿ ಮತ್ತು ಸಾಹಿತ್ಯವನ್ನು ಕುರಿತ ಒಂದು ಲೇಖನದಲ್ಲಿ ಆಗಲೇ ಸೂಚಿಸಿದೆನು. ನಮ್ಮ ಭಾವನೆಗಳು ಹೇಗಿದ್ದರೂ ತಮ್ಮತಮ್ಮ ಭಾವನೆಯನ್ನು ಅನುಸರಿಸಿ ಬರೆಯಬಲ್ಲವರೆಲ್ಲ ಬಲ್ಲಷ್ಟು ಚೆನ್ನಾಗಿ ಬರೆದು ಸಾಹಿತ್ಯವನ್ನು ಬೆಳಸಬೇಕು ಎಂದೂ ಇಂತಹ ಅಂತಹ ಸಾಹಿತ್ಯ ಬೇಕು ಎಂಬ ನಮ್ಮ ತರುಣ ಮಿತ್ರರು ಒಳ್ಳೆಯ ಸಾಹಿತ್ಯವನ್ನು ಬರೆಯಲಿ ಎಂದೂ ಆಶಿಸಿದೆನು. ಇದು ನನ್ನೊಬ್ಬನ ಆಶೆಯಲ್ಲ ; ಎಲ್ಲ ಕನ್ನಡಿಗರ ಆಶೆ.

## ವಿಮರ್ಶೆ ನೋಡಿಯೇ ಅಭಿಪ್ರಾಯಕ್ಕೆ ಬಂದೆ

ಇದಕ್ಕೆ ತಕ್ಕಂತೆ ಈ ನಮ್ಮ ಸ್ನೇಹಿತರು ಈಚೆಗೆ ಒಂದು ಕಥೆ ಬರೆದಿರುವ ಸಂಗತಿ ಅದನ್ನು ಕುರಿತ ಒಂದು ವಿಮರ್ಶೆಯಿಂದ ನನಗೆ ತಿಳಿಯಿತು. ಈ ಮಿತ್ರರು ಬರೆದ ಕಥೆ ಎಂಬ ಕಾರಣದಿಂದ ನಮಗೆ ಬೇಕಾದ ಸಾಹಿತ್ಯದ ಸ್ವರೂಪವನ್ನು ತಿಳಿಯಲು ಬಯಸಿ ವಿಮರ್ಶೆಯನ್ನು ಸ್ವಲ್ಪ ಕುತೂಹಲದಿಂದ ನೋಡಿದೆನು.

(ಈ ಕಥೆ ಪ್ರಕಟವಾಗಿ ಒಂದು ವರ್ಷಕ್ಕೂ ಮೇಲಾಯಿತು. ಆಗಲೇ ಪ್ರತಿಗಳು ತೀರಿಹೋಗಿವೆ, ಮುಂದೆ ಶ್ರೀಯವರು ಕಥೆಯ ಸಾರಾಂಶ ಕೊಟ್ಟು "ಬಾಳು–ಬರಹ" ಎಂಬ ಆ್ಯನಟೋಲ್ ಫ್ರಾನ್ಸ್ ಬರೆದ ಸಾಹಿತ್ಯ ವಿಮರ್ಶೆಯ ಎರಡನೆಯ ಭಾಗವನ್ನು ನೋಡಿದುದಾಗಿ ತಿಳಿಸಿ, ಅದರಿಂದಲೇ ಎತ್ತಿಕೊಂಡು ಮೊಪಾಸನ "ಪಿಯೆರೆ ಮತ್ತು ಜೀನ್" ಕತೆಯ ಸಾರವನ್ನೂ ಅದರ ಮೇಲಿನ ಟೀಕೆಯನ್ನೂ ಕೊಟ್ಟಿದ್ದಾರೆ. ಮುಂದೆ "ಫ್ರೆಂಚ್ ಕತೆಯ ಸಾರ" ಈ ಕನ್ನಡದ ಲೇಖಕರು ಫ್ರೆಂಚ್ ಕಥೆಯ ವಸ್ತುವನ್ನು ಸಂಗ್ರಹಿಸಿಕೊಂಡಿದ್ದಾರೆ. "ಇದು ಬಹು ದೊಡ್ಡ ವಿಷಯವೆಂದಲ್ಲ. ಲೇಖಕರು ಸಾಹಿತ್ಯಧರ್ಮವಾದ ಮೂಲವನ್ನು ಒಪ್ಪಿಕೊಳ್ಳಬೇಕಾಗಿತ್ತು" ಎಂದಿದಾರೆ.)

## ಆ ಲೇಖಕರ ಅನ್ಯಾಯವಾದರೂ ಏನು

ಫ್ರಾನ್ಸ್ ದೇಶದ ಕಥೆ ಒಂದನ್ನು ಹೀಗೆ ತೆಗೆದುಕೊಂಡು ಹೀಗೆ ಮಾರ್ಪಡಿಸಿಕೊಂಡು ಕನ್ನಡ ಜನದ ಜೀವನಚಿತ್ರ ಎಂಬಂತೆ ಈ ಕೃತಿಯನ್ನು ಬರೆದು ಈ ನಮ್ಮ ಸ್ನೇಹಿತರು ಕನ್ನಡದ ವಿಷಯದಲ್ಲಿ ತಪ್ಪಿ ನಡೆದಿದ್ದಾರೆ ಎಂದು ನನಗೆ ತೋರುತ್ತದೆ.

ಎತ್ತಿಕೊಳ್ಳುತ್ತ ಇವರು ಮಾಡಿರುವ ತಪ್ಪು, ತಾವೇ ಹಾಕಿಕೊಂಡಿಸುವ ಒಂದು ಸೂತ್ರವನ್ನು ನಡೆಸದೆ ಇರುವುದು. ಇವರಿಗೆ ಈಗ ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ ಬೇಕು. ಇದನ್ನು ಮಾಡದ ಕೃತಿ ಎಷ್ಟೇ ಒಳ್ಳೆಯದಾದರೂ ಈಗ ಬೇಡ. ಇದು ಬಾಯಲ್ಲಿ ಹೇಳುವ ಸೂತ್ರ. ಮಾಡಿರುವ ಕಾರ್ಯ ಈ ಸೂತ್ರದಿಂದ ಬಹು ದೂರ.

## ಪರಸಾಹಿತ್ಯದ ಸಹಾಯ ಬೇಡವೆಂದವರು ಅವರು

ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸುವ ಸಾಹಿತ್ಯ ಬರುವುದೇ ಒಳಿತು. ಏನೋ ನಮಗೆ ಪುಣ್ಯವಿಲ್ಲ, ಬರಲಿಲ್ಲ. ಕೃತಿಯಾದರೂ ಸ್ವತಂತ್ರವಾಗಿ ನಾವು ಸ್ವತಂತ್ರರಾಗಿರಲು ಶಕ್ತರು ಎಂದು ತೋರಿಸಿದರೆ ಅಷ್ಟೇ ಸಾಕು, ಎಂದು ನಾವು ಹೇಳಬಹುದು. ನಮ್ಮ ಸ್ನೇಹಿತರು ಇದನ್ನೂ ಮಾಡ ಲೊಲ್ಲರು. ಪರಸಾಹಿತ್ಯದ ಸಹಾಯವಿಲ್ಲದೆ ತಾವು ನಿಲ್ಲಲಾರೆವೆಂಬಂತೆ ನಡೆದುಕೊಂಡಿದ್ದಾರೆ. ನಮಗಿರುವ ರಾಜಕೀಯ ದಾಸ್ಯ ಸಾಲದು ಎಂಬಂತೆ ಸಾಹಿತ್ಯದಾಸ್ಯದಿಂದ ಅಲಂಕರಿಸಿಕೊಂಡಿದ್ದಾರೆ.

## ಕನ್ನಡ ಜೀವನದಲ್ಲಿ ಇದಿಲ್ಲ

ಹೀಗೆ ಮಾಡುವುದರಲ್ಲಿ ಇವರು ಕನ್ನಡನಾಡಿನಲ್ಲಿ ಇಲ್ಲದ ರೀತಿಯ ಒಂದು ಜೀವನವನ್ನು ಕನ್ನಡಿಗರಿಗೆ ಆರೋಪಿಸಿದ್ದಾರೆ. ಕನ್ನಡನಾಡ ಜನ ಪರಸ್ತ್ರೀಯರನ್ನು ಮುಟ್ಟುವುದಿಲ್ಲ ಎಂದಲ್ಲ; ಮುಟ್ಟುವ ಸಾವಿರದಲ್ಲಿ ಒಬ್ಬ ತನ್ನ ಸ್ನೇಹಿತನ ಹೆಂಡತಿಯನ್ನು ಮುಟ್ಟಿರಬಾರದೆಂದಲ್ಲ. ಆದರೆ ದೇಶವನ್ನುಳಿಸುವ ಕಥೆ ಬರೆಯುವವರು, ಈ ಕೊಳಕನ್ನು ಸಂಗ್ರಹಿಸಿ ನಮ್ಮದಾಗಿ ಮಾಡಿಕೊಂಡು ನಲಿಯಬೇಕೇ ?

## ಕಾದಂಬರಿ ಓದಿಲ್ಲ

ಇದರ ಮೇಲೆ ಇನ್ನೊಂದು ಪ್ರಶ್ನೆ. ತನ್ನ ಗೆಳತಿಯಲ್ಲಿ ಹುಟ್ಟಿದ ತನ್ನ ಮಗನಿಗೆ ಇಪ್ಪತ್ತುಸಾವಿರ ರೂಪಾಯಿ ಆಸ್ತಿಯನ್ನು 'ವಿಲ್' ಬರೆದು ಬಿಡುವ ಮಾಧವರಾಯ ಕನ್ನಡ ಸಮಾಜದಲ್ಲಿ ಎಷ್ಟರಮಟ್ಟಿಗೆ ಸಂಭವ ನೀಯ ವ್ಯಕ್ತಿ ? ಮಾಧವರಾಯನಿಗೆ ಇದಿಷ್ಟೂ ಸ್ವಾರ್ಜಿತ ಆಸ್ತಿಯೇ ? ಅವನಿಗೆ ನೆಂಟರು ಇಷ್ಟರು ಯಾರೂ ಇರಲಿಲ್ಲವೇ ? ಇಂತಹ ಮನುಷ್ಯ ಗೆಳತಿಗೆ ಹಣವನ್ನೋ ಒಡವೆಯನ್ನೋ ಕೊಟ್ಟಾನೇ ? ಅವಳ ಹೊಟ್ಟೆಯಲ್ಲಿ ಹುಟ್ಟಿದ ತನ್ನ ಮಗನಿಗೆ ಆಸ್ತಿಯನ್ನು ಬಿಟ್ಟಾನೇ ?

ನಮ್ಮ ಸಮಾಜದಲ್ಲಿ ಗೆಳೆಯ ಮಾಧವರಾಯನಂತಹ ವಿಲ್‌ಕಾರ ಸಂಭವನೀಯವಲ್ಲ ಎಂದು ನಮಗೆ ತೋರುತ್ತದೆ.

## ಇದು ಅಸಹನೀಯ

ವಿಮರ್ಶಿಸಿರುವ ಲೇಖಕರ ಮಿತ್ರರು ಹೀಗೆಂದು ಹೇಳಿದ್ದಾರೆ. "ಚಿಕ್ಕದಾದ ಚೊಕ್ಕ ಕಥೆ. ಲೇಖಕರು ಸಮಯ ಸನ್ನಿವೇಶಗಳಿಗಿಂತ ಮನಸ್ಸತ್ವಕ್ಕೆ ಹೆಚ್ಚು ಗಮನ ಕೊಟ್ಟಿದ್ದಾರೆ. —ರವರ ಮೊದಲನೆ ಕಾದಂಬರಿಯಿದು. ಆದರೂ ಪಳಗಿದ ಕೈಯಿಂದ ಬಂದಂತಿವೆ. —ರು ಇನ್ನೂ ಕಾದಂಬರಿಗಳನ್ನು ಬರೆಯಲೆಂದು ಆಶಿಸುತ್ತೇವೆ."

## ವಿಮರ್ಶಕ ಸಂದೇಹಪಡಬೇಕು

ವಿಮರ್ಶಕರಿಗೆ ಕಥೆ ಪರಭಾಷೆಯಿಂದ ಸಂಗ್ರಹಿಸಿದ್ದು ಎನ್ನುವುದು ತಿಳಿಯದು. ಇದನ್ನು ತಪ್ಪು ಎಂದು ನಾವು ಹೇಳಲಾಗದು. ಆದರೆ— ಇದೇನು ಸಾಧ್ಯವೆ ಎಂದು ಪ್ರಶ್ನೆಮಾಡಬೇಕು ಎಂದು ನನಗೆ ತೋರುತ್ತದೆ. ಸ್ವಲ್ಪ ಸಂದೇಹ, ಸ್ವಲ್ಪ ಪರಿಶೀಲನೆ, ಇಂಥ ಕಥೆಯ ವಿಮರ್ಶೆಯಲ್ಲಿ ಕಾಣಲೇಬೇಕು. ನಮ್ಮ ವಿಮರ್ಶಕರಲ್ಲಿ ಇದು ಕಂಡಿಲ್ಲ.

## ಬೀದಿಯ ಮಾತು

ಕಥೆಯ ವಸ್ತುವನ್ನು ಸಂಗ್ರಹಿಸಿದ ಲೇಖಕರು ಯಾವುದೇ ಕಾರಣ ದಿಂದ ಅದನ್ನು ಲೋಕಕ್ಕೆಲ್ಲಾ ಹೇಳದಿದ್ದರೂ ಗೆಳೆಯರಿಗೂ ತಿಳಿಸದೆ ಮರ್ಮವನ್ನು ಪಾಲಿಸುವುದು ತೀರಾ ತಪ್ಪು ಎಂದು ಹೇಳಬೇಕು. ಮಿಕ್ಕ ಮಾತು ಹಾಗಿರಲಿ. ಇಂತಹ ಲೇಖಕನು ವಿಮರ್ಶೆ ಮಾಡಹೊರಟ ತನ್ನ ಗೆಳೆಯನಿಗೆ ಅಡ್ಡಕಾಲಿಟ್ಟು ಅವನನ್ನು ಉರುಳಿಸಿದಂತಾಯಿತು. ಇದು ಸಾಹಿತ್ಯವನ್ನು ಕುರಿತು ಮಾತ್ರ ತಪ್ಪಲ್ಲ. ಗೆಳೆತನವನ್ನು ಕುರಿತೂ ತಪ್ಪು.

## ನಮ್ಮ 'ಜೀವನ' ಕ್ಕೆ ಹೊಂದಲಿ

ನಮ್ಮ ಜೀವನಕ್ಕೆ ಹೊಂದುತ್ತದೆಯೆ ಇಲ್ಲವೆ ಎಂಬುದನ್ನು ನೋಡದೆ ಪಾಶ್ಚಾತ್ಯ ಸಾಹಿತ್ಯದ ಸನ್ನಿವೇಶಗಳನ್ನು ಸಂಗ್ರಹಿಸಿ ಕನ್ನಡದ ಬಾಳು ಎಂಬಂತೆ ಚಿತ್ರಿಸುವ ಇಂತಹ ಸಾಹಿತ್ಯ ನಮಗೆ ಒಳ್ಳೆಯದನ್ನು ಮಾಡ ಲಾರದು. ನಮ್ಮ ಮಿತ್ರರು ಇಂತಹ ಕೃತಿಗಳನ್ನು ರಚಿಸದಿದ್ದರೆ ಚೆನ್ನವೆಂದು ನಾನು ಸೂಚಿಸುತ್ತೇನೆ. ಹಾಗೂ ತೆಗೆದುಕೊಳ್ಳುವುದಾದರೆ ಅಂತಹ ಕೃತಿ

ಸ್ವತಂತ್ರವೆಂಬ ಭ್ರಮೆಯನ್ನು ಉಂಟುಮಾಡದೆ ಮೂಲವನ್ನು ಒಪ್ಪಿಕೊಳ್ಳುವುದು ತೀರಾ ಆವಶ್ಯಕ.

**ಆ ಕೃತಿ ಕನ್ನಡದ ನಾಯಕರತ್ನ**

ಭಾಷಾಂತರವೆಂದು ತಿಳಿದವರು, ಅದು ಕನ್ನಡ ಸಾಹಿತ್ಯದ ಒಂದು ನಾಯಕರತ್ನ ಎಂದು ಅದನ್ನು ಇಂಗ್ಲೀಷಿಗೋ ಫ್ರೆಂಚಿಗೋ ಭಾಷಾಂತರ ಮಾಡಿದರೆ ಕನ್ನಡಿಗರ ಬಂಡವಾಳ ಇಷ್ಟೆಯೇ ಎಂದು ಹೊರಗಿನ ಜನ ಬೆರಗಾದಾರು. ಕನ್ನಡಕ್ಕೆ ಹೀಗಾಗದಂತೆ ನಾವೆಲ್ಲ ನೋಡಿಕೊಳ್ಳಬೇಕು.

ಸಾಹಿತ್ಯ ಸತ್ಯದಿಂದ, ಆರ್ಜವದಿಂದ ಮೂಡಬೇಕು! ಓದುವವರಲ್ಲಿ ಸತ್ಯವನ್ನು, ಅರ್ಜವವನ್ನು ಮೂಡಿಸಬೇಕು. ಇಂತಹ ಸಾಹಿತ್ಯ ನಮಗೆ ಬೇಕಾದ ಸಾಹಿತ್ಯ. ಇಂತಹದಲ್ಲದ ಎಂಥ ಸೋಗಿನ ಸಾಹಿತ್ಯವೂ ಕನ್ನಡಕ್ಕೆ ಎಂದಿಗೂ ಬೇಡ.

—ಮಾ. ವೆಂ. ಅ.

---

# ಸಾಹಿತ್ಯದಲ್ಲಿ ಫಾಸಿಸಂ

**ವಿಚಾರ—ಇದು**

ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಜುಲೈ ತಿಂಗಳ 'ಜೀವನ' ಪತ್ರಿಕೆಯಲ್ಲಿ "ನಮಗೆ ಬೇಕಾದ ಸಾಹಿತ್ಯ" ಎಂಬ ಒಂದು ಲೇಖನ ಬರೆದು ಈಚೆಗೆ ಪ್ರಕಟವಾದ ಒಂದು ಪುಸ್ತಕ ಅದರ ಮೇಲೆ ಬಂದ ಒಂದು ವಿಮರ್ಶೆಯನ್ನು ಚರ್ಚಿಸಿದ್ದಾರೆ. ಶ್ರೀಯುತರು ಪುಸ್ತಕದ ಹೆಸರು, ಲೇಖಕರ ಹೆಸರು, ವಿಮರ್ಶಕರ ಹೆಸರುಗಳನ್ನು ಬಿಟ್ಟಿದ್ದರೂ ಅವು ಯಾವುವೆಂದು ಕನ್ನಡಿಗರಿಗೆ ಗೊತ್ತಿಲ್ಲದಿಲ್ಲ. ತರುಣಲೇಖಕರಾದ ಶ್ರೀ ತ. ರಾ. ಸುಬ್ಬರಾಯರು ಬರೆದ "ಮನೆಗೆ ಬಂದ ಮಹಾಲಕ್ಷ್ಮಿ" ಕಾದಂಬರಿಯನ್ನು ಕುರಿತು ಶ್ರೀ ನಾಡಿಗೇರ ಕೃಷ್ಣರಾಯರು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' ಸಂ. ೩೦, ಸಂ. ೧ ರಲ್ಲಿ ಬರೆದ ವಿಮರ್ಶೆಯನ್ನು ಕುರಿತ ವಿಷಯ ಇದು.

## ಕೃತಿಚೌರ್ಯ ಖಂಡನೀಯ

ಶ್ರೀ ಮಾಸ್ತಿಯವರು ಕೆಲವು ಆಪಾದನೆಗಳನ್ನು ಗ್ರಂಥಕರ್ತರ ಮೇಲೆ ಹೊರೆಸಿದ್ದಾರೆ. ಫ್ರಾನ್ಸಿನ ಸಿದ್ಧ ಸಾಹಿತಿಯಾದ ಗಯ್ ಡಿ. ಮೋಪಾಸನ 'ಪೀರೆ ಮತ್ತು ಜೀನ್' ಕಾದಂಬರಿಯನ್ನು ಭಟ್ಟಿಯಿಳಿಸಿ ತ. ರಾ. ಸು. ಅವರು ಅವನ ಹೆಸರನ್ನೂ ಎತ್ತದೆ ತಪ್ಪುಮಾಡಿದ್ದಾರೆಂದು ಶ್ರೀ ಮಾಸ್ತಿಯವರ ಆಪಾದನೆ. ಸದ್ಯಕ್ಕೆ ಈ ವಿಷಯ ನಮಗೆ ಗೌಣ. ತ. ರಾ. ಸು. ಅವರು ಅಂತಹ ಕೃತಿಚೌರ್ಯಕ್ಕೆ ಕೈ ಹಾಕಿದ್ದರೆ ಅವರ ಪ್ರಯತ್ನ ಖಂಡನೀಯವಾದುವೆಂದು ನಾನು ನಿಸ್ಸಂದೇಹವಾಗಿ ಹೇಳಬಲ್ಲೆ. 'ಸಾಹಿತ್ಯ ಸತ್ಯದಿಂದ, ಆರ್ಜವದಿಂದ ಮೂಡಬೇಕು; ಓದುವವರಲ್ಲಿ ಸತ್ಯವನ್ನು ಆರ್ಜವವನ್ನು ಮೂಡಿಸಬೇಕು'—ಕನ್ನಡದಲ್ಲಿ ಒಳ್ಳೆಯ ಸ್ವತಂತ್ರ ಸಾಹಿತ್ಯ ಹುಟ್ಟಲೆಂದು ಈ ಲೇಖನ ತಾವು ಬರೆದಿರುವುದಾಗಿ ಶ್ರೀಯುತರು ಹೇಳಿಕೊಂಡಿದ್ದಾರೆ. ಲೇಖನದ ಹಿಂದಿನ ಮನೋಭಾವವನ್ನು ಸ್ವಲ್ಪ ಪರೀಕ್ಷಿಸುವ.

## ಓದುವ ಅಭ್ಯಾಸ ಬೇಕು

ತ. ರಾ. ಸು. ಅವರ ಪುಸ್ತಕವನ್ನು ಸತ್ಯದ ಮಾನದಂಡದಿಂದ ಅಳೆಯಲು ಹೊರಟಿರುವ ಶ್ರೀಯುತರು ಅದನ್ನೂ, ಅದರ ಮೂಲವೆನಿಸಿಕೊಂಡಿರುವ ಮೋಪಸಾನ ಕಾದಂಬರಿಯನ್ನೂ ಓದಬೇಕಾದುದು ಅಗತ್ಯ. 'ನಮ್ಮ ಸ್ನೇಹಿತರು ಈಚೆಗೆ ಒಂದು ಕಥೆ ಬರೆದಿರುವ ಸಂಗತಿ ಅದನ್ನು ಕುರಿತ ಒಂದು ವಿಮರ್ಶೆಯಿಂದ ನನಗೆ ತಿಳಿಯಿತು' ಎಂದು ಶ್ರೀಯುತರು ಒಪ್ಪಿಕೊಂಡಿದ್ದಾರೆ. ಮೂಲದ ಕಥೆಗೆ ಅನತೋಲ್ ಫ್ರಾನ್ಸ್ ಬರೆದ ಒಂದು ವಿಮರ್ಶೆಯನ್ನು ಆಶ್ರಯಿಸಿದ್ದಾರೆ. ಶ್ರೀಯುತರು ತ. ರಾ. ಸು. ಮೋಪಸಾ ಇಬ್ಬರನ್ನು ಓದಿಲ್ಲವೆಂದು ಸ್ವತಸ್ಸಿದ್ಧವಾಗುತ್ತದೆ. ಕನ್ನಡ ಸಂಸ್ಕೃತಿ, ಕನ್ನಡಿಗರ ಪುರೋಭಿವೃದ್ಧಿಯ ಬಗ್ಗೆ ಬಹಳ ಉದ್ದುದ್ದ ಮಾತನಾಡುವ ಈ ಮಹನೀಯರು ಕನ್ನಡ ಪುಸ್ತಕಗಳನ್ನು ಓದುವ ಅಭ್ಯಾಸವನ್ನು ಕೂಡ ಇಟ್ಟುಕೊಂಡಿಲ್ಲ—ಆದರೆ ಕನ್ನಡ ಲೇಖಕರ ಮೇಲೆ ತಮ್ಮ ಅಭಿಪ್ರಾಯಗಳನ್ನು ಸೂಚಿಸುವುದಕ್ಕೆ ಹಿಂಜರಿಯುವುದಿಲ್ಲ.

## ಶೀಲದ ಪ್ರಶ್ನೆ ಅಯುಕ್ತ

ತ. ರಾ. ಸು. ಅವರ ಪುಸ್ತಕವನ್ನು ವಿಮರ್ಶೆಮಾಡಹೊರಟ ಶ್ರೀ ಮಾ. ವೆಂ. ಅ. ಅವರು ತ. ರಾ. ಸು. ಅವರ ಸ್ನೇಹಧರ್ಮದ ಮೇಲೂ ಅನುಚಿತ ಮಾತುಗಳನ್ನಾಡಿದ್ದಾರೆ. ತಾವು ಮಹಾಲಕ್ಷ್ಮಿಗೆ ಮೋಪಾಸನ ಕಥೆಯಿಂದ ಎರವಲು ತೆಗೆದುಕೊಂಡಿದ್ದನ್ನು ಗೆಳೆಯರಲ್ಲಿಯಾದರೂ ಹೇಳ ಬೇಕಾಗಿತ್ತೆಂದು ಶ್ರೀಯುತರ ಮತ. ಗ್ರಂಥವಿಮರ್ಶೆಯ ವ್ಯಾಜದಲ್ಲಿ ಕಿರಿಯ ಲೇಖಕರೊಬ್ಬರ ಶೀಲವನ್ನು ಪ್ರಶ್ನಿಸಿ ಅವರು ಸ್ನೇಹಕ್ಕೂ ಅಯೋಗ್ಯರೆಂದು ಹೇಳಹೊರಟಿರುವ ಶ್ರೀ ಮಾ. ವೆಂ. ಅವರ ನೀತಿ ಅಷ್ಟು ಮೇಲ್ಮಟ್ಟದ್ದಾಗಿ ಕಂಡುಬರುವುದಿಲ್ಲ.

## ಹಿಂದಿನ ಸೋಲು ಹಿಂದಿನ ಉರಿ

ಇಷ್ಟೆಲ್ಲ ರೊಚ್ಚಿಗೇನು ಕಾರಣ? ತ. ರಾ. ಸು. ಅವರು ಅನೀತಿ ಸಾರುವ ಕಾದಂಬರಿ ಬರೆದರೆಂದೇ?—ಕನ್ನಡಿಗರಲ್ಲಿಲ್ಲದ ಒಂದು ಕೊರತೆಯನ್ನು ಆರೋಪಿಸಿದರೆಂದೇ?–ಸಾಹಿತ್ಯ ಸತ್ಯವನ್ನು ಕಡೆಗಾಣಿಸಿದರೆಂದೇ?–ಯಾವುದೂ ಅಲ್ಲ. ೨-೮-೪೪ ರಲ್ಲಿ ಪರಿಷತ್ತಿನಲ್ಲಿ 'ಪ್ರಗತಿಶೀಲ ಸಾಹಿತ್ಯ ಭಾಷಣಮಾಲೆ'ಯಲ್ಲಿ ಮಾತನಾಡುತ್ತ ತ. ರಾ. ಸು. ಅವರು ದೇಶದ ಆವಶ್ಯಕತೆಯನ್ನು ಗುರುತಿಸುತ್ತ 'ಸುಬ್ಬಣ್ಣ'ನಿಗಿಂತಲೂ, ದೇಶಕ್ಕೆ ಸ್ಥೈರ್ಯವನ್ನು ಕೊಡುವ ವೀರ ಸಾಹಿತ್ಯದ ಅಗತ್ಯವನ್ನು ಒತ್ತಿಹೇಳಿದರು. 'ಸುಬ್ಬಣ್ಣ' ನಿರ್ಮಾಪಕರಾದ ಶ್ರೀ ಮಾಸ್ತಿಯವರ ಮನಸ್ಸು ನೊಂದಿತು. ತಮ್ಮ 'ಸುಬ್ಬಣ್ಣ'ನನ್ನು ಬಾಯಿತುಂಬ ಬಣ್ಣಿಸದಿದ್ದ ಗ್ರಂಥಕರ್ತರ ಮೇಲೆ ಕತ್ತಿ ಹಿರಿದು ನಿಂತರು. 'ನನ್ನ ಪುಸ್ತಕ ಸಾಲದೆಂದೆ—ನಿನ್ನ ಪುಸ್ತಕ ಹೇಗಿದೆ ಒಂದು ಕೈ ತೋರಿಸುತ್ತೇನೆ' ಎಂಬ ಮನೋಭಾವದಿಂದ ಕಾಳಗದ ಕಣಕ್ಕೆ ಕಾಲಿಟ್ಟರು, ಸ್ವಪ್ರತಿಷ್ಠೆಯಲ್ಲಿ ಮಗ್ನರಾಗಿ, ಆತ್ಮಪ್ರಶಂಸೆ, ಮುಖಸ್ತುತಿಗಳೇ ಜೀವನದ ಪರಮಸಾಧನಗಳೆಂದು ಬಗೆದಿರುವ ಮಾಸ್ತಿಯವರೂ ಅವರ ಮಿತ್ರ, ಶಿಷ್ಯಕೋಟಿಯೂ ಈ ಮನೋಭಾವದಿಂದ ಪ್ರೇರಿತರಾಗಿ ತ. ರಾ. ಸು. ಅಂತಹ ವರ್ಧಿಷ್ಣು ಸಾಹಿತಿಗಳನ್ನು ಮುರಿಯಲು ಹೊರಟಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. 'ಇದು ಸಾಹಿತ್ಯಪ್ರಪಂಚದ ಫಾಸಿಸಂ'

ಎಂದು ನಾವು ಸಾರಿಸಾರಿ ಹೇಳುತ್ತ ಬಂದಿದ್ದೇವೆ. ಈ ಹಿರಿಯರ ಬಂಧನ ದಿಂದ ಮುಕ್ತರಾಗದ ಕನ್ನಡ ಜನಕ್ಕೆ, ಕನ್ನಡ ಸಾಹಿತಿಗಳಿಗೆ ಏಳ್ಗೆ ಇಲ್ಲ. ಓದುಗನ ವಿಚಾರಶಕ್ತಿಯನ್ನು ಕುಂಠಿಸಿ ಅವನ ಮೇಲೆ ಡಿಫೆನ್ಸ್ ಆಫ್ ಇಂಡಿಯಾ ಕಾಯಿದೆಯನ್ನು ಹಾಕಿರುವ ಈ ಸಾಹಿತ್ಯದ ಚರ್ಚಿಲ್, ಅಮೆರಿಗಳಿಂದ ಕನ್ನಡನಾಡು ವಿಮುಕ್ತವಾಗಬೇಕು. ಸಹನೆ, ಸೌಹಾರ್ದ ವೆಂಬ ಒಣಮಾತುಗಳನ್ನಾಡುವ ಶ್ರೀ ಮಾಸ್ತಿಯವರ ಸಹನೆ, ಸೌಹಾರ್ದ ಗುಣಗಳೆಲ್ಲಿಗೆ ಹೋದವು ?

## ಈ ನೀತಿ ಅಳಿಸೋಣ

ಕಿರಿಯರು ಸಂಘಟಿತರಾಗಬೇಕು. ಈ ದಬ್ಬಾಳಿಕೆಯನ್ನು ಕೊನೆ ಗಾಣಿಸಬೇಕು. ಮಾಸ್ತಿಯವರು ತಮ್ಮ ಲೇಖನದಲ್ಲಿ ಒಬ್ಬ ಕಿರಿಯ ಸಾಹಿತಿಯನ್ನು ತಿದ್ದುವ ಉದ್ದೇಶದಿಂದ ಪ್ರೇರಿತರಾಗಿ ಅವನ ತಪ್ಪುಗಳನ್ನು ಎತ್ತಿ ತೋರಿಸಿದ್ದರೆ ನಾವು ಅವರಿಗೆ ಚಿರಋಣಿಗಳಾಗಿರುತ್ತಿದ್ದೆವು. ಅವರ ದಾರಿ ಗೆಳೆಯನ ದಾರಿಯಲ್ಲ, ನೀತಿ ತಾಯಿಯ ನೀತಿಯಲ್ಲ. ಇದು ಅತ್ಯಾಚಾರ. ಪ್ರತಿಭಾಶಾಲಿಯಾದ ಕಿರಿಯ ಲೇಖಕ ಒಂದು ತಪ್ಪುಹೆಜ್ಜೆ ಹಾಕಿದನೆಂದು, ತಮ್ಮ ಪ್ರತಿಷ್ಠೆಗೆ ಧಕ್ಕೆ ತಂದನೆಂದು ಅವನನ್ನು ತುಳಿಯುವ ಪ್ರಯತ್ನ-ಫಾಸಿಸಂ ನೀತಿ-ಇದನ್ನು ನಾನು ಖಂಡಿಸುತ್ತೇನೆ. ಕನ್ನಡ ಸಾಹಿತ್ಯ, ಜನಜೀವನದ ಪುರೋಭಿವೃದ್ಧಿಯಲ್ಲಿ ಆಸಕ್ತರಾದ ಎಲ್ಲರೂ ಖಂಡಿಸಬೇಕು. ಇಲ್ಲದಿದ್ದರೆ ಈ ಹಿರಿಯರ ಕಾಲತುಳಿತಕ್ಕೆ ಸಿಕ್ಕಿ ನಾಶ ವಾಗಬೇಕು.

ವಿಶ್ವಕರ್ನಾಟಕ ೮-೭-೧೯೪೫ ಅ. ನ. ಕೃಷ್ಣರಾಯ.

---

## "ನಮಗೆ ಬೇಕಾದ ಸಾಹಿತ್ಯ"ವನ್ನು ಕುರಿತ ಟೀಕೆ

"ನಮಗೆ ಬೇಕಾದ ಸಾಹಿತ್ಯ" ಎಂಬ ತಲೆಕಟ್ಟಿನಲ್ಲಿ ಜೂಲೈ ತಿಂಗಳ 'ಜೀವನ'ದಲ್ಲಿ ನಾನು ಪ್ರಕಟಿಸಿದ ಲೇಖನವನ್ನು ಕುರಿತು ಹಲಕೆಲವು ಟೀಕೆ ನನ್ನನ್ನು ಮುಟ್ಟಿವೆ. ಅವುಗಳ ಸಾರಾಂಶ ಹೀಗೆ:—

೧. ಯಾರೋ ಕೃತಿಚೌರ್ಯ ಮಾಡಿದರೆನ್ನುವುದು ಕ್ಷುಲ್ಲ ವಿಷಯ. ಅದಕ್ಕೆ ದೊಡ್ಡವರು ಇಷ್ಟು ಪ್ರಾಮುಖ್ಯ ಕೊಡಬಾರದಾಗಿತ್ತು.

೨. ನಮ್ಮ ಈಗಿನ ಸಾಹಿತ್ಯದಲ್ಲಿ ಬೇಕಾದಷ್ಟು ಕೃತಿಚೌರ್ಯ ನಡೆಯುತ್ತಿದೆ. ಎಲ್ಲವನ್ನೂ ಬಿಟ್ಟು ಇದರ ಮೇಲೆ ಏಕೆ ಟೀಕೆ ಮಾಡ ಬೇಕಾಗಿತ್ತು ?

೩. "ಸುಬ್ಬಣ್ಣ"ವನ್ನು ಒಬ್ಬರು ಬಾಯಿತುಂಬ ಹೊಗಳದ ಕಾರಣ ದಿಂದ "ಸುಬ್ಬಣ್ಣ"ದ ಲೇಖಕರು ಅವರಿಗೆ ತಾವು ಒಂದು ಕೈ ತೋರಿ ಸಿದ್ದಾರೆ.

೪. ಪ್ರಸಕ್ತ ಪುಸ್ತಕವನ್ನು ನೋಡದೆ ಅದನ್ನು ಕುರಿತು ಟೀಕಿ ಸಿದ್ದಾರೆ.

೫. ಹಿರಿಯರು ಕಿರಿಯರ ಮೇಲೆ ಸೇಡಿನಿಂದ ಹೀಗೆ ಕೈ ಮಾಡು ವುದು "ಫಾಸಿಸಂ." ಕಿರಿಯರು ಒಂದಾಗಿ ಇದನ್ನು ಧ್ವಂಸಮಾಡಬೇಕು.

೬. ಪರಿಷತ್ತಿನ ಹಿರಿಯರು ಅದರ ರಂಗದಲ್ಲಿ ಹೀಗೆ ಕಚ್ಚಾಡ ಬಾರದು. ಹೊರಗೆ ಚರ್ಚೆ ಮಾಡಬೇಕು. ಜೀವನ ಪತ್ರಿಕೆಯಲ್ಲಿ ಮಾಡಲಿ.

೭. ಈ ಚರ್ಚೆ ಹೊಲಸು. ಇದನ್ನು ಎತ್ತಿಹಾಕುವವರು ಯಾರು ?

೮. ಪ್ರಾಸಂಗಿಕವಾಗಿ ಒಂದು ಟೀಕೆ. ಒಬ್ಬ ಕನ್ನಡಿಗ ತನ್ನ ಸ್ನೇಹಿತನ ಹೆಂಡತಿಯನ್ನು ಕೆಡಿಸಲಾರನೆಂದು ಮಾಸ್ತಿಯವರ ಅಭಿಪ್ರಾಯ. ಕನ್ನಡಿಗರಲ್ಲಿ ಎಂತಹ ನಡತೆ ಸಾಧ್ಯ ಎನ್ನುವುದನ್ನು ತಿಳಿಯುವುದಕ್ಕೆ ಇವರು ಶ್ರೀ ಕಾರಂತರ "ಹೆತ್ತಳಾ ತಾಯಿ" ಗ್ರಂಥವನ್ನು ಓದಬೇಕು.

## ಆಕ್ಷೇಪ ಕೃತಿಚೌರ್ಯವನ್ನು ಕುರಿತದ್ದಲ್ಲ

ತರುಣ ಮಿತ್ರರೊಬ್ಬರು ಕೃತಿಚೌರ್ಯ ಮಾಡಿದರು ಎನ್ನುವುದು ಆ ನನ್ನ ಲೇಖನದ ವಿಷಯವಲ್ಲ. ಎಂತಹ ಸಾಹಿತ್ಯ ಬೇಕು ಎಂದು ಹೇಳು ತ್ತಿದ್ದರೋ ಅಂತಹ ಸಾಹಿತ್ಯವನ್ನು ಬರೆಯದೆ, ಎಂತಹ ಸಾಹಿತ್ಯ ಬೇಡ ವೆಂದು ಹೇಳಿದ್ದರೊ ಅಂತಹ ಸಾಹಿತ್ಯವನ್ನು ಇವರು ನಿರ್ಮಿಸಿದರು ಎನ್ನು ವುದು ನನ್ನ ಆಕ್ಷೇಪಣೆ. ಈ ಸಂದರ್ಭದಲ್ಲಿ ಕೃತಿಚೌರ್ಯ ಇಲ್ಲದೆ

ಹೋಗಿದ್ದರೂ, ಕೃತಿ ಸ್ವತಂತ್ರವಾಗಿದ್ದು ಅತ್ಯುತ್ತಮವಾಗಿದ್ದರೂ, ಈ ಆಕ್ಷೇಪ ಲೇಶವೂ ಕಡಮೆಯಾಗದೆ ಈಗಿನಷ್ಟೇ ಅನ್ವಯಿಸುತಿತ್ತು.

ಕೃತಿಚೌರ್ಯಕ್ಕಿಂತ ಹೆಚ್ಚಾಗಿ ನಮ್ಮದಲ್ಲದ ಜೀವನವನ್ನು ನಮ್ಮದು ಎಂಬಂತೆ ಭ್ರಮೆ ಹುಟ್ಟಿಸುವ ರೀತಿಯಲ್ಲಿ ಸ್ವೀಕರಿಸಿದ್ದು ನನಗೆ ಕಂಡ ಮುಖ್ಯವಾದ ತಪ್ಪು. ಕೃತಿಚೌರ್ಯ ಎಂಬ ಪದವನ್ನು ನಾನು ಉಪ ಯೋಗಿಸಲಿಲ್ಲ. ಒಂದು ಕತೆಯ ತಡಿಕೆಯನ್ನು ಬೇರೊಂದು ಕಡೆಯಿಂದ ತೆಗೆದುಕೊಂಡಾಗಲೆಲ್ಲ ಕೃತಿಚೌರ್ಯವಾಗುತ್ತದೆಂದು ನಾನು ಹೇಳಲಾರೆ. ಈ ಸಂದರ್ಭದಲ್ಲಿ ನನ್ನ ಸ್ನೇಹಿತರು ಮಾಡಿರುವುದು ಕೃತಿಚೌರ್ಯ ಆಗು ತ್ತದೆಯೇ ಆಗುವುದಿಲ್ಲವೇ ಎನ್ನುವುದನ್ನು ಈ ವಿಚಾರದಲ್ಲಿ ಆಸಕ್ತಿ ಉಳ್ಳವರು ಇಷ್ಟವಿದ್ದರೆ ಪರಿಶೀಲಿಸಬಹುದು.

ಸ್ವೀಕರಣ ಚೌರ್ಯವೆನ್ನುವ ಮಟ್ಟಕ್ಕೆ ಮುಟ್ಟಿದರೆ ಅದನ್ನು ಯಾರು ಮಾಡುವುದೂ ತಪ್ಪೇ.

**ಲೇಖನ ಪ್ರಸಕ್ತ ಗ್ರಂಥದ ವಿಮರ್ಶೆಯಲ್ಲ**

ನಾನು ಗ್ರಂಥವನ್ನು ವಿಮರ್ಶಿಸಲಿಲ್ಲ. ಆದ್ದರಿಂದ ಅದನ್ನು ಓದು ವುದು ಆವಶ್ಯಕವಾಗಲಿಲ್ಲ. 'ಅಂತಹ ಸಾಹಿತ್ಯ ಬೇಡ ಇಂತಹದು ಬೇಕು ಎಂದವರು ಇಂತಹದನ್ನು ಬರೆಯದೆ ಅಂತಹದನ್ನು ಬರೆದರು:' ಇಷ್ಟೇ ನನ್ನ ಚರ್ಚೆಗೆ ಪ್ರಕೃತವಾಗಿದ್ದುದು. ಇಷ್ಟನ್ನು ಹೇಳುವುದಕ್ಕೆ ವಿಮರ್ಶಕರ ಕಥಾಸಂಗ್ರಹ ಸಾಕಾದಷ್ಟು ಆಧಾರವಾಗಿತ್ತು.

**ಸೇಡಿಗೆ ಕಾರಣ ಇಲ್ಲ**

ನಮ್ಮ ಮಿತ್ರರು ನನ್ನ ಕೃತಿಯನ್ನು ಹೊಗಳದ್ದರಿಂದ ನಾನು ಸೇಡು ತೀರಿಸಿಕೊಂಡಿದ್ದೇನೆಂದು ಹೇಳುವ ಮಾತು ಇಲ್ಲಿ ಅನ್ವಯಿಸುವುದಿಲ್ಲ. ಈ ಕತೆಯನ್ನು ಬರೆದ ತಮ್ಮ ಮಿತ್ರರು "ಸುಬ್ಬಣ್ಣ" ಗ್ರಂಥವನ್ನು ಬಾಯ ತುಂಬವೇ ಹೊಗಳಿದರು. ನನ್ನ ಲೇಖನಕ್ಕೆ ಉತ್ತರ ಬರೆದಿರುವ ಮಹ ನೀಯರೂ ಆ ಅಭಿಪ್ರಾಯವನ್ನು ಅನುಮೋದಿಸಿದರು. ಕನ್ನಡ ಕೃತಿ ಯೊಂದನ್ನು ಒಪ್ಪದವರ ಮೇಲೆಲ್ಲ ಕೋಪಮಾಡಿಕೊಂಡು ನಾನು ಸೇಡು ತೀರಿಸಿಕೊಳ್ಳುವವನು ಎಂದೇ ಈ ವಾದಕ್ಕಾಗಿ ಗ್ರಹಿಸುವುದಾದರೂ ಇಲ್ಲಿ ಸೇಡಿಗೆ ಕಾರಣವಿಲ್ಲ.

16

## ನಮ್ಮ ಸಾಹಿತ್ಯದಲ್ಲಿ "ಫಾಸಿಸಂ"

ಕನ್ನಡ ಸಾಹಿತ್ಯದಲ್ಲಿ ಫಾಸಿಸ್ಟ್ ರೀತಿಯ ಮಾತನ್ನು ತೆಗೆಯುವವರು ಈ ನಮ್ಮ ಸ್ನೇಹಿತರು. ತಮ್ಮ ಅಭಿಪ್ರಾಯದ ಸಾಹಿತ್ಯ ಮಾತ್ರ ಇರಬೇಕು, ಉಳಿದದ್ದು ಬೇಡ ಎಂದು ಇವರು ಹೇಳುತ್ತಾರೆ. ಇದೀಗ "ಫ್ಯಾಸಿಸಂ." 'ಇದು ತಪ್ಪು, ನಿಮ್ಮ ಅಭಿಪ್ರಾಯ ಒಂದು ಅಭಿಪ್ರಾಯ, ಬೇರೆ ಹತ್ತು ಅಭಿಪ್ರಾಯದ ಜನ ತಮ್ಮತಮ್ಮಂತೆ ಕೃತಿಗಳನ್ನು ಬರೆಯಲಿ' ಎಂದು ನಾನು ಹೇಳುತ್ತಿದ್ದೇನೆ. "ಫ್ಯಾಸಿಸಂ" ಅನ್ನು ಧ್ವಂಸಮಾಡುವುದಕ್ಕೆ ಹೊರಟಿರುವವನು ನಾನು. ಆದರೆ ಈ ತಪ್ಪುಮಾಡುತ್ತಿರುವವರು ನನ್ನ ಕನ್ನಡ ಸೋದರರಾದುದರಿಂದ, ವಯಸ್ಸಿನಲ್ಲಿ ನನಗಿಂತ ಕಿರಿಯರಾದುದ ರಿಂದ, ನಾನು ಧ್ವಂಸ ಎಂಬ ಶಬ್ದವನ್ನು ಪ್ರಯೋಗಿಸಲಾರದೆ ಇದೇನೆ.

## ವಾದದ ಸ್ಥಾನ, ರೀತಿ

ಈ ವಾದವನ್ನು ನಾನು ಪರಿಷತ್ತಿನ ಅಧಿಕಾರಸ್ಥಾನದಿಂದ ಮಾಡು ತ್ತಿಲ್ಲ. ಜೀವನ ಪತ್ರಿಕೆಯಲ್ಲೇ ಮಾಡುತಿದೇನೆ. ನನ್ನ ರೀತಿ ಕಚ್ಚಾಟ ದ್ದಲ್ಲ. ಪ್ರತಿಪಕ್ಷ ಹಲವೇಳೆ ಮರ್ಯಾದೆ ಮರೆತಿದೆ.

ನನ್ನ ಚರ್ಚೆ ಹೊಲಸನ್ನು ಸೃಷ್ಟಿಸುತ್ತಿಲ್ಲ. ಇರುವ ಹೊಲಸನ್ನು ಕಳೆಯಿರಿ ಎಂದು ಹೇಳುತ್ತಿದೆ. ಕಸ ಗುಡಿಸುವಾಗ ದೂಳು ಏಳುತ್ತದೆ. ಆದರೆ ದೂಳು ಏಳುತ್ತದೆಂದು ಕಸ ಗುಡಿಸದೆ ಇರಬಾರದು.

ಪ್ರಾಸಂಗಿಕ ಟೀಕೆ ಮಾಡಿರುವವರು ನನ್ನ ಮಾತಿಗೆ ಸ್ಪಷ್ಟವಾಗಿ ವಿರೋಧವಾದ ಅಭಿಪ್ರಾಯವನ್ನು ನನಗೆ ಆರೋಪಿಸಿದಾರೆ. ಇಂಥವರು ನನ್ನ ಲೇಖನವನ್ನು ಇನ್ನೊಮ್ಮೆ ಓದಬೇಕು.

## ಚರ್ಚೆಯ ಅವಶ್ಯಕತೆ

ನಾನು ಈ ವಾದದ ಮಾತುಗಳನ್ನಾಡುವುದು ನನ್ನ ಸಾತ್ವಿಕ ಮಿತ್ರ ರನೇಕರಿಗೆ ಇಷ್ಟವಿಲ್ಲ. ನಾನಾದರೂ ಈ ವಾದದಲ್ಲಿ ತೊಡಗಿರುವುದು ನಾಲಗೆಯ ರುಚಿಗಾಗಿ ಅಲ್ಲ. ವಿಷಯ ಒಂದರ್ಥಕ್ಕೆ ಸಣ್ಣದು ನಿಜ. ಒಂದರ್ಥಕ್ಕೆ ಅದು ದೊಡ್ಡದೂ ಹೌದು. ವ್ಯಾಧಿ ಮೊದಲಾಗುವುದು ಬಹು

ವೇಳೆ ಸಣ್ಣದಾಗಿಯೆ. ಅದು ದೊಡ್ಡದಾಗುವವರೆಗೆ ಅದನ್ನು ಗಮನಿಸ ದಿರುವುದು ಎಚ್ಚರದ ನಡೆಯಲ್ಲ. ಇರುವ ಹತ್ತು ಜನ ಒಂದುಗೂಡಿ ಕೆಲಸ ಮಾಡುವುದೇ ? ಇಷ್ಟಬಂದವರು ಇಷ್ಟಬಂದಂತೆ ಯಾರೆಂದರೆ ಅವರಿಗೆ 'ನೀವು ಲೇಖನವನ್ನು ನಿಲ್ಲಿಸಿ' ಎನ್ನಲು ಬಿಡುವುದೆ ? ವಿಷಯ ಸಾಹಿತ್ಯ ಸೇವಾಧಿಕಾರದ ಮೂಲವನ್ನು ಕುರಿತದ್ದು. ಇದು ಸಣ್ಣದೆಂದು ನನಗೆ ತೋರುತ್ತಿಲ್ಲ.

ಮತ್ತೆ ಯಾವ ದೃಷ್ಟಿಯಿಂದ ಇದು ಸಣ್ಣದೆಂದು ಕಂಡರೂ ಸಾಹಿತ್ಯ, ಸಂಸ್ಕೃತಿ, ಜನಜೀವನದ ಮುಂಬರಿವನ್ನು ಗುರಿಯಾಗಿ ಇಟ್ಟುಕೊಂಡಿರುವ ಈ ಪತ್ರಿಕೆಯ ದೃಷ್ಟಿಯಿಂದ ಇದು ಗುರುವಾದದ್ದು ; ಗುರುತಮವಾದದ್ದು.

ಇನ್ನೂ ಉಪಯುಕ್ತವಾದ ಕೆಲಸವನ್ನು ಮಾಡಬಹುದಾದ ನಾನು ಈ ಚರ್ಚೆಯಲ್ಲಿ ಶಕ್ತಿವ್ಯಯ ಮಾಡುತ್ತಿದ್ದೇನಲ್ಲ ಎಂದು ಮಿತ್ರರು ಹೇಳಿದಾರೆ. ಕನ್ನಡ ಸರಸ್ವತಿಯ ದೇವಾಲಯದಲ್ಲಿ ಸೇವೆಗೆ ನಿಂತಿರುವ ಮನುಷ್ಯನಿಗೆ ಎಲ್ಲ ಸೇವೆಯೂ ಮುಖ್ಯವೇ. ಚಾಮರಹಾಕುವುದು ಹೆಚ್ಚಲ್ಲ. ಕಸ ದೂಡುವುದು ಕಡಮೆಯಲ್ಲ. ಉಪಯೋಗವಾದ ಮಾತನ್ನು ಹೇಳಬಹು ದಾಗಿತ್ತು ; ಅನುಪಯೋಗದ ಮಾತು ಬೇಡ ಎಂದು ಹೇಳುವುದರಲ್ಲಿ ಕಾಲ ಕಳೆಯುತ್ತಿದೆ. ಇದು ದೈವದ ಇಚ್ಛೆ ; ನನ್ನ ಮತ್ತು ನನ್ನ ಈ ಸೋದರರ ಪುಣ್ಯ. ಒಳಿತಲ್ಲ ; ಆದರೆ ವಿಧಿಯಿಲ್ಲ.

ಜೀವನ ಸಂಪುಟ ೬, ಸಂಚಿಕೆ ೫

## ಕೊನೆಯ ಮಾತು

ಶ್ರೀ ಮಾ. ವೆಂ. ಅವರ ಉತ್ತರ ಮೊದಲಿನ ಧ್ವನಿಯನ್ನೇ ಪ್ರತಿ ಪಾದಿಸುತ್ತದೆ. ತ. ರಾ. ಸು ಅವರ ಪುಸ್ತಕವನ್ನು ಓದದೆ ಮಾಡಿದ ಕಟು ಟೀಕೆಗೆ ಸಮಾಧಾನ ಹುಡುಕಲೆತ್ನಿಸಿದ್ದಾರೆ. ನಮ್ಮ ಉತ್ತರದ ಮಾತು ಬದಲಾಯಿಸಬೇಕಾಗಿಲ್ಲ. ಒಟ್ಟು ಚರ್ಚೆ ಇಲ್ಲಿ ಕೊಡಲಾಗಿದೆ. ಯಾವದು 'ಫಾಸಿಸ್ಟ ನೀತಿ' ಎನ್ನುವುದನ್ನು ಓದುಗರು ನಿರ್ಣಯಿಸಲಿ.

ಅ. ನ. ಕೃ.

———

# ೩೨. ಕರ್ನಾಟಕ ನೃತ್ಯ

ಯುರೋಪಿನ ಪ್ರವಾಸದಿಂದ ಈಗತಾನೆ ಹಿಂದಿರುಗಿರುವ ಶ್ರೀಮತಿ ಮೇನಕಾ (ಮಿಸಸ್ ಲೀಲಾ ಸೋಖೆ) ಅವರು ತಮ್ಮ ಪ್ರವಾಸಾನುಭವವನ್ನು ಹೀಗೆ ಹೇಳಿದ್ದಾರೆ—

"ಭಾರತೀಯ ನೃತ್ಯಕ್ಕೆ ಜರ್ಮನಿಯಲ್ಲಿ ಬಹಳ ಮನ್ನಣೆ ದೊರೆಯಿತು. ನಾನು ಹರ್ ಹಿಟ್ಲರನೇ ಮೊದಲಾದ ನಾಝಿ ನಾಯಕರ ಮುಂದೆ ನೃತ್ಯಮಾಡಿದೆ. ಅವರೂ ಮತ್ತು ಸಾಧಾರಣ ಕೂಲಿಗಾರರೂ ಕೂಡ ನಮ್ಮ ನೃತ್ಯಕಲೆಯನ್ನು ಬಹಳ ಮೆಚ್ಚುತ್ತಾರೆ. ಆ ಅಭಿಮಾನ ನಮ್ಮಲ್ಲಿ ಇದ್ದರೆ ಎಷ್ಟು ಚೆನ್ನಾಗಿರುತ್ತದೆ."

ಭಾರತೀಯ ನೃತ್ಯಕಲೆಯಲ್ಲಿ ಸಾರ್ವಜನಿಕ ಅಭಿಮಾನವನ್ನು ಬೆಳೆಸುವುದಕ್ಕೆ ಶ್ರೀಮತಿಯವರು ಎರಡು ಸಲಹೆಗಳನ್ನಿತ್ತಿದ್ದಾರೆ.

೧. ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ನೃತ್ಯಕಲಾಮಂಡಲವನ್ನು ತೆರೆದು ಆಯಾ ಭಾಗದ ಕಲೆಯನ್ನು ಸಂಗ್ರಹಿಸುವುದು,

೨. ಸರ್ಕಾರ ಆದಷ್ಟು ಕಡೆ ನೃತ್ಯಶಾಲೆಗಳನ್ನು ತೆರೆದು ನೃತ್ಯವನ್ನು ಬೋಧಿಸುವುದು.

ಅನಾದರಣೆಯಿಂದ ಖಿಲವಾಗುತ್ತಿರುವ ಭಾರತೀಯ ಕಲೆಗಳಲ್ಲಿ ನೃತ್ಯವೂ ಒಂದು. ರಷ್ಯಾದ ಸುಪ್ರಸಿದ್ಧ ನರ್ತಕಿಯಾದ ದಿವಂಗತ ಅನಾ ಪವಲೋವಾ 'ರಾಧಾ-ಕೃಷ್ಣ' ನೃತ್ಯವನ್ನು ಕೂಡಿಸಿ ಪ್ರದರ್ಶಿಸುವವರೆಗೆ ಪ್ರಾಚ್ಯಪಾಶ್ಚಾತ್ಯ ಜಗತ್ತುಗಳು ಭಾರತೀಯ ನೃತ್ಯಕಲೆಯ ಕಡೆಗೆ ಗಮನ ವಿಡಲಿಲ್ಲ. ಇಂದು ಉದಯಶಂಕರ್, ಮೇನಕಾ, ಗೋಪೀನಾಥ, ರಾಗಿಣಿ ದೇವಿಯವರ ಮತ್ತು ಕೇರಳ ಕಲಾಮಂಡಲದ ಮಹಾಕವಿ ವಳ್ಳತ್ತೋಳರ ಪ್ರಯತ್ನದಿಂದ ವಿದ್ವಜ್ಜನದ ಲಕ್ಷ್ಯ ಭಾರತೀಯ ನೃತ್ಯಕಲೆಯ ಕಡೆಗೆ ಬೀಳುತ್ತಿದೆ.

ಭಾರತೀಯ ನೃತ್ಯಕಲೆಯಲ್ಲಿ ದಕ್ಷಿಣದ್ದೇ ಒಂದು ಸಂಪ್ರದಾಯಬದ್ಧವಾದ ಕಲಾತ್ಮಕ ಮಾರ್ಗವಿದೆ. ಅದು ಸ್ವಲ್ಪಮಟ್ಟಿಗೆ ಕೇರಳ ಕಲಾಮಂಡಳದ 'ಕಥಾಕಳಿ' ನೃತ್ಯಗಳಿಂದಲೂ, ಮಂಗಳೂರಿನ ಯಕ್ಷಗಾನ

ದಿಂದಲೂ ಹೊರಬಿದ್ದಿದೆ. ಈಚೆಗೆ ಡಾ. ರಾಘವನ್‌ರವರ ಪ್ರಯತ್ನದಿಂದ ಶ್ರೀಮತಿ ಭಾನುಮತಿ 'ಜಲಜಾ' ಎನ್ನುವ ತಮಿಳು ಚಲನಚಿತ್ರದಲ್ಲಿ ಕೆಲವು ಸಾಂಪ್ರದಾಯಿಕ ದಕ್ಷಿಣಾದಿ ನೃತ್ಯಗಳನ್ನು ಪ್ರದರ್ಶಿಸಿದಳು. ವೇಶ್ಯೆಯರು ಮತ್ತು ದೇವದಾಸಿಯರ ಕೈಗೆ ಸಿಲುಕಿದ್ದ ಈ ಕಲೆ ಈಗ ನಾಮಾವಶೇಷವಾಗುತ್ತಿದೆ. ಮೈಸೂರಿನಲ್ಲಿ ಸಾಮಾನ್ಯವಾಗಿ ಪ್ರತಿ ಮದುವೆಯ ಸಂದರ್ಭದಲ್ಲಿಯೂ ಕಾಣುತ್ತಿದ್ದ 'ತಾಫೆ' ಈಗ ಗ್ರಾಮಫೋನ್ ಸಂಗೀತಕ್ಕೆ ಎಡೆಕೊಟ್ಟಿದೆ.

ಕರ್ನಾಟಕದಲ್ಲಿ ಶ್ರೀ ಕಾರಂತರೂ, ಶ್ರೀ ಕುಲಕರ್ಣಿ ಶ್ರೀನಿವಾಸರೂ ನೃತ್ಯಕಲೆಯ ಪುನರುಜ್ಜೀವನಕಾರ್ಯದಲ್ಲಿ ತೊಡಗಿದ್ದಾರೆ. ಅವರಿಗೆ ಬೆಂಬಲವಾಗಿ ಒಂದು ಕರ್ನಾಟಕ ನೃತ್ಯಮಂಡಲವು ಸ್ಥಾಪನೆಯಾಗಬೇಕಾದುದು ಆವಶ್ಯಕ.

ಎಲ್ಲ ಕಲೆಗಳಲ್ಲಿ ಕರ್ನಾಟಕವು ಹೇಗೆ ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಕಾಪಾಡಿಕೊಂಡಿದೆಯೋ ನೃತ್ಯದಲ್ಲಿಯೂ ಹಾಗೇ ಕಾಪಾಡಿಕೊಂಡಿದೆ. ಬೇಲೂರು, ಹಳೆಯಬೀಡು ದೇವಾಲಯಗಳೂ, ಅಜಂತಾ, ಬಾದಾಮಿಯ ಚಿತ್ರಕೃತಿಗಳೂ ಕರ್ನಾಟಕ ನೃತ್ಯಕಲಾ ವಿಧಾನದ ಕೈಪಿಡಿಗಳಾಗಿವೆ. ಭಾರತೇಶವೈಭವ, ಮೋಹನತರಂಗಿಣಿ ಕಾವ್ಯಗಳಲ್ಲಿ ನೃತ್ಯಕಲೆಯ ಬಗ್ಗೆ ಅನೇಕ ಉಪಯುಕ್ತ ವಿಷಯಗಳು ದೊರೆಯುತ್ತವೆ. ನಮ್ಮ ಲಕ್ಷಣಕಾರರು ಅನೇಕ ರಸ, ಅಲಂಕಾರ ಗ್ರಂಥಗಳಲ್ಲಿ ನೃತ್ಯಕಲೆಯ ತತ್ವಗಳನ್ನು ವಿವೇಚಿಸಿದ್ದಾರೆ.

ಉಡುಗೆತೊಡಿಗೆ, ಹಾವಭಾವ, ರಸಾಭಿನಯ ಎಲ್ಲವುಗಳಲ್ಲಿಯೂ 'ಕರ್ನಾಟಕ'ದ ಅಚ್ಚೊತ್ತಿದ ನೃತ್ಯಕಲಾ ಸಂಪ್ರದಾಯವು ನಮ್ಮಲ್ಲಿ ಬೆಳೆಯಬೇಕು. ಉತ್ತರಕರ್ನಾಟಕದಲ್ಲಿ ಪ್ರಸಾರದಲ್ಲಿರುವ 'ಕಥಕ್' ಮತ್ತು ಮೈಸೂರು ಕರ್ನಾಟಕದಲ್ಲಿರುವ 'ತಾಫೆ' ಮಾದರಿಗಳು ಹೊಸ ರೂಪದಲ್ಲಿ ಆವಿರ್ಭವಿಸಬೇಕು.

ಕನ್ನಡ ಕಲಾಭಿಮಾನಿಗಳು ಈ ಕಡೆಗೆ ಲಕ್ಷ್ಯ ಕೊಡುವರೇ?

ಕನ್ನಡ ನುಡಿ ೨೩-೧೨-೩೮

———

# ೩೩. ಮುಂಬಯಿಯಲ್ಲಿ ಕನ್ನಡ ಕಲಾವಿದರು

ಕರ್ನಾಟಕದ ಸರ್ವತೋಮುಖ ಪ್ರಗತಿಯನ್ನು ಬಯಸುವವರು ಕನ್ನಡ ಕಲಾವಿದರು, ಸಾಹಿತಿಗಳು, ರಾಜಕಾರಣಪಟುಗಳು, ವಿಜ್ಞಾನ ವೇತ್ತರು ಮೊದಲಾದ ವಿದ್ವಜ್ಜನರ ಪ್ರಗತಿಯನ್ನು ನಿರೀಕ್ಷಿಸುವುದು ಸಹಜವೆ ಆಗಿದೆ. ಕನ್ನಡ ನಾಡಿನಲ್ಲಿ ಅದರ ಕಲಾವಿದರು ಯಾವ ಯಾವ ರೀತಿಯಲ್ಲಿ ಕಲಾಸೇವೆಯನ್ನೆಸಗುತ್ತಿದ್ದಾರೆಂದು ನೋಡುವುದು ಎಷ್ಟು ಮುಖ್ಯವೊ ಹೊರಗೆ ಕನ್ನಡ ಕಲಾವಿದರು ಎಂತಹ ಯಶವನ್ನು ದೊರಕಿಸಿಕೊಂಡಿದ್ದಾರೆಂದು ತಿಳಿಯುವುದು ಅಷ್ಟೇ ಮುಖ್ಯವಾಗಿದೆ; ಹೆಚ್ಚು ಮುಖ್ಯವಾಗಿದೆ ಎಂದು ಹೇಳಿದರೂ ತಪ್ಪಾಗುವುದಿಲ್ಲ. ಕಲಾವಿದರ ಸೇವೆ ಕನ್ನಡ ನಾಡಿನಲ್ಲಿ ಕಲಾಸೇವೆಯ ರೂಪವನ್ನು ಧರಿಸಿದರೆ ಹೊರಗೆ ಅದು ಕನ್ನಡದೇಶದ ಮತ್ತು ಅದರ ಹಿರಿಯ ಸಂಸ್ಕೃತಿಯ ಸೇವೆಯ ರೂಪವನ್ನು ಧರಿಸುತ್ತದೆ.

ಆದರೆ ನಾವು ಒಂದು ಸಂಕ್ಷಿಪ್ತವಾದ ವಿಷವ್ಯೂಹದಲ್ಲಿ ಸಿಕ್ಕಿ ತೊಳಲಾಡುತ್ತಿದ್ದೇವೆ. ಕಲಾವಿದ, ಸಾಹಿತಿ ಇಬ್ಬರು ಸರ್ವತಂತ್ರ ಸ್ವತಂತ್ರರಾದ ವ್ಯಕ್ತಿಗಳಾಗಿದ್ದಾರೆ. ಕಲೆಯೆಂದರೆ ಮೂಗು ಮುರಿಯುವ ಸಾಹಿತಿಗಳೂ ಸಾಹಿತ್ಯವೆಂದರೆ ಹುಚ್ಚು ಹುಯ್ಯಲಾಟವೆಂದು ತಿರಸ್ಕರಿಸುವ ಕಲಾವಿದರೂ ನಮ್ಮಲ್ಲಿ ಹೇರಳ. ಸಾಹಿತ್ಯ, ಕಲೆಗಳಿಗಿರುವ ಸಹಜಮೈತ್ರಿಯನ್ನು ಅರಿಯಲು ಸಾಹಿತಿಗಳೂ ಕಲಾವಿದರೂ ಉತ್ಸುಕರಾಗಿಲ್ಲ. ಅಷ್ಟೇಕೆ, ಸಂಗೀತಗಾರನಿಗೆ ಚಿತ್ರಕಾರನೆಂದರೆ ತಿರಸ್ಕಾರ; ಚಿತ್ರಕಾರನಿಗೆ ಶಿಲ್ಪಿಯೆಂದರೆ ಅಸಡ್ಡೆ; ಗದ್ಯಲೇಖಕನಿಗೆ ಪದ್ಯಲೇಖಕನೆಂದರೆ ಅಸಹ್ಯ; ನಾಟಕಕಾರನಿಗೆ ಕಥೆಗಾರನೆಂದರೆ ಅವಹೇಳನ. ಈ ಸಂಕ್ಷಿಪ್ತ ಹೃದಯಸ್ಥಿತಿಯು ಕಲಾವಿದ, ಸಾಹಿತಿಗಳ ಆನಂದಲೋಕವನ್ನು ಸಂಕುಚಿತಗೊಳಿಸಿ, ಒಂದು ಅನನುಕರಣೀಯವಾದ ಅಹಂಭಾವದಿಂದ ಅವರ ಕೃತಿ ವಿಷಮಯವಾಗುವಂತೆ ಮಾಡುತ್ತದೆ. ಕಲಾವಿದ ಸಾಹಿತಿ ಇಬ್ಬರೂ ಉದ್ದೇಶಮಾಡುವುದು ಸತ್ಯ, ಸೌಂದರ್ಯ, ಶಕ್ತಿಯ ಉಪಾಸನೆಯನ್ನು. ಅವರವರ ಗಮ್ಯ ಬೇರೆಯಾದರೂ ಗುರಿ ಒಂದೇ.

ಇಂದು ಅನೇಕ ಕನ್ನಡ ಕಲಾವಿದರು ಕನ್ನಡನಾಡಿನ ಹೊರಗೆ ಮುಂಬಯಿ, ಕಲ್ಕತ್ತೆ, ಮದರಾಸು, ಲಖನೌ, ದೆಲ್ಲಿ ಮೊದಲಾದ ಪಟ್ಟಣಗಳಲ್ಲಿ ನೆಲಸಿ ಕನ್ನಡ ಕಲೆಗಳ ಹಿರಿಮೆಯನ್ನೂ ಕನ್ನಡಿಗರ ಕಲಾನೈಪುಣ್ಯವನ್ನೂ ಜಗತ್ತಿಗೆ ಸಾರುತ್ತಿದ್ದಾರೆ. ಕರ್ನಾಟಕದ ಸಾಂಸ್ಕೃತಿಕ ರಾಯಭಾರಿಗಳಾಗಿ ಇವರು ಮಾಡುತ್ತಿರುವ ಸೇವೆ ಅಮೋಘವಾದುದು.

ಮುಂಬಯಿಯಲ್ಲಿ ಕೆಲವು ಕನ್ನಡ ಕಲಾವಿದರು ಅನೇಕ ಎಡರು ತೊಡರುಗಳನ್ನು ಎದುರಿಸಿ ಕನ್ನಡ ಕಲಾಜನನಿಯ ಸೇವೆಯನ್ನು ಮಾಡುತ್ತಿದ್ದಾರೆ. ಅವರ ಪರಿಚಯವನ್ನು ಸೂಕ್ಷ್ಮವಾಗಿ ಮಾಡಿಕೊಡುವುದೇ ಈ ಲೇಖನದ ಉದ್ದೇಶ.

## ಸಂಗೀತ

ಮುಂಬಯಿಯ ಸಂಗೀತ ಪ್ರಪಂಚ ಸಂಪೂರ್ಣವಾಗಿ ಕನ್ನಡ ಕಲಾವಿದರ ಕೈಯಲ್ಲಿದೆಯೆಂದರೆ ತಪ್ಪಾಗುವುದಿಲ್ಲ. ಇಂದು ಪ್ರಸಿದ್ಧಿಗೆ ಬಂದಿರುವ ಬಹುಮಂದಿ ಮಹಾರಾಷ್ಟ್ರ ಕೋಗಿಲೆಗಳು ಕನ್ನಡಿಗರಾದ ವಿಷ್ಣು ದಿಗಂಬರ ಮತ್ತು ಅಬ್ದುಲ್ ಕರೀಂ ಖಾನ್‌ರವರು ಶಿಷ್ಯರು. ಮುಂಬಯಿಯ ವಿದ್ವತ್ ಸಂಗೀತ ಸಂಸ್ಥೆಗಳಲ್ಲಿ ಧಾರವಾಡದ ಸಂಗೀತರತ್ನ ಮಲ್ಲಿಕಾರ್ಜುನ ಮನಸೂರ್, ಹುಬ್ಬಳ್ಳಿಯ ಬಾಯಿ ಗಂಗೂಬಾಯಿಯವರ ಗಾನವೆಂದರೆ ಅಚ್ಚುಮೆಚ್ಚು. ಮಲ್ಲಿಕಾರ್ಜುನರ ಗಾನ ಒಂದು ಸಮ್ಮೋಹನಾಸ್ತ್ರ. ಅವರು ಮುಂಬಯಿಗೆ ಬಂದಿದ್ದಾರೆಂದರೆ ಇತರ ವಿದ್ವಾಂಸರ ನಿರ್ಣೀತ ಕಛೇರಿ (ಬೈಠಕ)ಗಳೂ ಹೋಗಿ ಅವರಿಗೆ ಎಡೆ ದೊರೆಯುತ್ತದೆ. ಮಹಾರಾಷ್ಟ್ರ ಜನತೆ ಕೂಡ ಅವರ "ತೀರನೆಳೆಯುತಾರೆ ತಂಗಿ" "ನೀನೊಲಿದರೆ" "ಹಕ್ಕಿ ಬಂದಿತು" ಮೊದಲಾದ ಕನ್ನಡ ಪದಗಳನ್ನು ಮೇಲಿಂದ ಮೇಲೆ ಕೇಳುತ್ತಾರೆಂದ ಮೇಲೆ ಅವರ ಪ್ರಭಾವಕ್ಕೆ ಬೇರೆ ಸಾಕ್ಷ್ಯವೇ ಬೇಕಿಲ್ಲ. ಮುಂಬಯಿಯಲ್ಲಿ ಒಂದು ಕಾಲದಲ್ಲಿ ಶ್ರೀಮತಿ ಹೀರಾಬಾಯಿ ಬರೋಡಕರ್ ಅವರ ಪ್ರಭಾವ ಬಹಳವಾಗಿ ಇತ್ತು. ಗ್ರಾಮಫೋನ್, ರೇಡಿಯೋ, ಜಲಸಾ ಎಲ್ಲೆಡೆಯಲ್ಲಿಯೂ ಆಕೆಯದೇ ಗಾನವಾಗಿತ್ತು. ಈಗ ಆ ಸ್ಥಾನ ಹುಬ್ಬಳ್ಳಿಯ ಗಂಗೂಬಾಯಿಯವರದು. ಹೀರಾಬಾಯಿಗಿಂತ ವಿದ್ವತ್ತಿನಲ್ಲಿ

ಬಹಳ ಮುಂದುವರಿದಿರುವ ಈ ಕನ್ನಡ ಕಲಾವಿದೆ ಮುಂಬಯಿಯ ಸಂಗೀತ ಪ್ರೇಮಿಗಳ ಅಚ್ಚುಮೆಚ್ಚಾಗಿದ್ದಾಳೆ. ದೊಡ್ಡ ದೊಡ್ಡ ಸಂಗೀತ ಸಮಾಜ ಗಳಲ್ಲಿ ಮಲ್ಲಿಕಾರ್ಜುನರಂತೆ ಪ್ರಭಾವಶಾಲಿಗಳಾದ ಇನ್ನೊಬ್ಬ ವಿದ್ವಾಂಸರು ಕನ್ನಡಿಗರಾದ ಕುಂದಗೋಳದ ರಾಮರಾಯರು (ಸವಾಯ್ ಗಂಧರ್ವ). ಇವರ ಗುರುಗಳಾದ ಅಬ್ದುಲ್ ಕರೀಂಖಾನವರಿಗೆ ಕೂಡ ಸಿಕ್ಕದ ಸ್ಥಾನ ಇವರಿಗೆ ಸಿಕ್ಕಿದೆ. ರಾಮರಾಯರನ್ನು ನಿಸ್ಸಾರ್ ಹುಸೇನ, ವಿಲಾಯತ್, ಆಷೀಕ ಅಲ್ಲಿಯವರ ಪಂಕ್ತಿಯಲ್ಲಿ 'ವಿದ್ವಜ್ಜನರು' ಗೌರವಿಸುತ್ತಾರೆ.

ಕಿರಿಯರಲ್ಲಿ ಗದುಗಿನ ಕುಮಾರ ಗಂಧರ್ವ ಮತ್ತು ಮಾಸ್ಟರ್ ಬಸವರಾಜ ಇವರ ಕೀರ್ತಿ ಚೆನ್ನಾಗಿದೆ. ಕುಮಾರ ಗಂಧರ್ವನ ಪ್ರತಿಭೆ ಮುಂಬಯಿಯ ಜನಗಳ ಮೇಲೆ ಪರಿಣಾಮಕಾರಿಯಾಗಿ ಮೂಡಿದೆ. ಬಸವರಾಜ ಮುಂಬಯಿ ರೇಡಿಯೋ ಶ್ರಾವಕರಿಗೆ ಬಹಳ ಪ್ರೀತಿಪಾತ್ರ ನಾಗಿದ್ದಾನೆ.

ಸೊಲ್ಲಾಪುರದ ಮೆಹಬೂಬ ಜಾನ್ ಗಂಗೂಬಾಯಿಯಂತೆ ರೇಡಿಯೋ ಮತ್ತು ಕಛೇರಿಗಳ ಮೂಲಕ ಮುಂಬಯಿಯಲ್ಲಿ ಪ್ರಸಿದ್ಧಳಾಗಿದ್ದಾಳೆ. ಕನ್ನಡ ದೇವರ ನಾಮಗಳನ್ನು ಆಗಿಂದಾಗ್ಗೆ ಈಕೆ ರೇಡಿಯೋ ಮೂಲಕ ಹಾಡುತ್ತಾಳೆ.

ಮುಂಬಯಿ ರೇಡಿಯೋ ಸಂಸ್ಥೆಯ ಸಂಗೀತ ನಿರ್ದೇಶಕರು ಕನ್ನಡಿಗ ರಾದ ಅಮ್ಮೆಂಬಳ ದಿನಕರರಾಯರು. ಕನ್ನಡಿಗರಾಗಿಯೂ ಕನ್ನಡ ನಾಡನ್ನು ಮರೆಯಲೆತ್ನಿಸುತ್ತಿರುವವರಲ್ಲಿ ರಾಯರೊಬ್ಬರೆಂದು ದುಃಖದಿಂದ ಹೇಳಬೇಕಾಗಿದೆ. ಇಂತಹ ಅಧಿಕಾರಸ್ಥಾನಗಳಲ್ಲಿರುವ ಕನ್ನಡಿಗರು ಸ್ವಲ್ಪ 'ಸ್ವಾಭಿಮಾನಧನ'ರಾದರೆ ಕನ್ನಡನಾಡು ಧನ್ಯವಾಗುತ್ತದೆ.

ವಾದ್ಯವಾದನದಲ್ಲಿ ಹುಬ್ಬಳ್ಳಿಯ ಕೋರಗಾಂವಕರ ಅವರ ಹಾರ್ಮೋ ನಿಯಂ ವಾದನವೂ ಧಾರವಾಡದ ರಹಮತ್ ಜಾನ್‌ರವರ ಸಾರಂಗಿ ವಾದ ನವೂ ಮುಂಬಯಿಯಲ್ಲಿ ಬಹಳ ಹೆಸರು ಪಡೆದಿವೆ. ದೊಡ್ಡ ಕಛೇರಿಗಳಿಗೆ ಇವರ ಪಕ್ಕವಾದ್ಯ ಇಲ್ಲದಿರುವುದೇ ಅಪರೂಪ.

ಕನ್ನಡನಾಡಿನಿಂದ ಆಗಂತುಕರಾಗಿ ಹೋಗಿ ಬಂದ ವಿದ್ವಾಂಸರಲ್ಲಿ ಮೈಸೂರಿನ ಚೌಡಯ್ಯ, ದೇವೇಂದ್ರಪ್ಪ ಮತ್ತು ಕೇಶವಮೂರ್ತಿ ಒಳ್ಳೆಯ

ಕೀರ್ತಿಯನ್ನು ಗಳಿಸಿಕೊಂಡಿದ್ದಾರೆ. ಮಾತುಂಗದಲ್ಲಿರುವ ದಾಕ್ಷಿಣಾತ್ಯರಲ್ಲದೆ ಔತ್ತರೇಯರೂ ಇವರ ಕರ್ಣಾಟಕ ಸಂಗೀತವನ್ನು ಕೇಳಿ ಮೆಚ್ಚಿದ್ದಾರೆ. ಈಚೆಗೆ ಶ್ರೀಮತಿ ಜಿ. ಚೆನ್ನಮ್ಮನವರು ಕೆಲವು ಕಾಲ ಮುಂಬಯಿಯಲ್ಲಿ ನಿಂತು ಕರ್ಣಾಟಕ ಸಂಗೀತದ ಪ್ರಸಾರವನ್ನು ಚೆನ್ನಾಗಿ ಮಾಡಿ ಬಂದಿದ್ದಾರೆ. ಹುಬ್ಬಳ್ಳಿಯ ಬಾಲಭಾರತಿ ಕನಕಾಪುರ ಗುರುರಾಜ ಮಿಂಚಿನಂತೆ ಸುಳಿದು ಬಂದು ತನ್ನ ಅಮೋಘ ಹಾರ್ಮೋನಿಯಂ ವಾದ್ಯವಾದನದಿಂದ ಎಲ್ಲರ ಚಿತ್ತವನ್ನೂ ಅಪಹರಿಸಿದ್ದಾನೆ.

## ಚಲನ ಚಿತ್ರ

ಚಲನಚಿತ್ರ ರಂಗದಲ್ಲಿ ಹೆಚ್ಚು ಜನ ಕನ್ನಡಿಗರು ಪ್ರವೇಶವಾಗಲನುಕೂಲವಾಗಿಲ್ಲ. ಆದರೆ ಸಾಹಸಿಗರಾದ ಕೆಲವರು ಅಲ್ಲಿಯೂ ನುಗ್ಗದೆ ಬಿಟ್ಟಿಲ್ಲ. ಸಾಗರ್ ಕಂಪೆನಿಯಲ್ಲಿದ್ದು ಈಗ ಸ್ವತಂತ್ರವಾಗಿ ಚಿತ್ರಗಳನ್ನು ತಯಾರಿಸುತ್ತಿರುವ ಬಾದಾಮಿಯವರು ಕನ್ನಡಿಗರು. ಅವರಿಗೆ ಇನ್ನೂ ಕನ್ನಡತನದ ಅರಿವಾಗಿಲ್ಲ; ಅದು ಆದಂದು ಅವರಿಂದ ಕನ್ನಡ ಚಿತ್ರಪಟಗಳನ್ನು ನಾವು ನಿರೀಕ್ಷಿಸಬಹುದು. ರಣಜಿತ್, ವಾಡಿಯಾ, ಬಾಂಬೆ ಟಾಕೀಸ್, ನ್ಯಾಷನಲ್ ಸ್ಟುಡಿಯೋಗಳ ವಿಜ್ಞಾನ ಶಾಖೆಗಳಲ್ಲಿ ಅನೇಕ ಕನ್ನಡಿಗರು ಕೆಲಸಮಾಡುತ್ತಿದ್ದಾರೆ. ನಟನಟಿಯರಲ್ಲಿ ಸೋಹನಿ, ವಿನಾಯಕ್, ಬಾಬುರಾವ್ ಪೆಂಡಾರಕರ್, ವತ್ಸಲಾ ಕುಮತೇಕರ್, ಅಮೀರ್ ಕರ್ನಾಟಕಿ, ಗೋಹರ್ ಕರ್ನಾಟಕಿ, ನಾಯಂಪಳ್ಳಿ, ಶಾಂತಾ ಹುಬ್ಬಳ್ಳೀಕರ್–ಇವರೆಲ್ಲಾ ಕನ್ನಡಿಗರೇ !

## ಚಿತ್ರಕಲೆ : ಶಿಲ್ಪ

ದಂಡಾವತಿಮಠ ಅವರು ದೊಡ್ಡ ಕಲಾಶಾಲೆಯನ್ನು ಇಟ್ಟುಕೊಂಡು ನೂರಾರು ವಿದ್ಯಾರ್ಥಿಗಳಿಗೆ ಚಿತ್ರಕಲೆಯನ್ನು ಹೇಳಿಕೊಡುತ್ತಿದ್ದಾರೆ. ಇವರ ಚಿತ್ರಗಳು ಪ್ರತಿ ವರ್ಷ ಪ್ರದರ್ಶಿತವಾಗಿ ಬಹುಮಾನ ಪಡೆಯುತ್ತಿವೆ. ಮಿಣಜಗಿ ಮಡಿವಾಳಪ್ಪನವರು ಶಾಂತರೀತಿಯಿಂದ ತಮ್ಮ ಚಿತ್ರಕಲಾ ಕೆಲಸವನ್ನು ಸಾಗಿಸಿಕೊಂಡು ಹೋಗುತ್ತಿದ್ದಾರೆ. ರಾಘವೇಂದ್ರರಾಯರು 'ಟೈಮ್ಸ್ ಆಫ್ ಇಂಡಿಯಾ' ವಾರ ಪತ್ರಿಕೆಯ ಕಲಾ ವಿಭಾಗದಲ್ಲಿ ಸ್ಥಾನ

ಪಡೆದಿದ್ದಾರೆ. ಇವರ ದ್ವಿವರ್ಣ ಚಿತ್ರಗಳಿಗೆ ಮುಂಬಯಿ ಪ್ರದರ್ಶನಗಳಲ್ಲಿ ಯಾವಾಗಲೂ ಬಂದು ಬಹುಮಾನ ಕಟ್ಟಿಟ್ಟದ್ದೆ. ತರುಣ ಶಿಲ್ಪಿ ವರ್ಖೇಡಿ ಅನೇಕ ದೊಡ್ಡ ಸಂಸ್ಥೆಗಳ ಶಿಲ್ಪಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

### ಕೊನೆಯ ಮಾತು

ಕರ್ನಾಟಕವನ್ನು ಬಿಟ್ಟು ಹೊರಗೆ ಹೋದ ಕನ್ನಡಿಗರು ತಮ್ಮ ಮಾತೃಭೂಮಿಯನ್ನು ಮರೆಯದಿರುವ ಪರಿಪಾಠವನ್ನಿಟ್ಟುಕೊಳ್ಳಬೇಕು. ಹೊರಗೆ ಹೋದ ತಮ್ಮ ಕನ್ನಡ ಬಂಧುಗಳನ್ನು ಮರೆಯದಿರುವುದು ತಮ್ಮ ಧರ್ಮವೆಂದು ಕನ್ನಡಿಗರು ಭಾವಿಸಬೇಕು. ಆಗಲೇ 'ಸಿರಿಗನ್ನಡಂಗೆಲ್ಗೆ' ಎಂಬ ಮಹಾವಾಕ್ಯ ಸಾರ್ಥಕವಾಗುವುದು.

ಪ್ರತಿಭಾ (೧೯೩೯)

---

## ३೪. ಕನ್ನಡ ನಾಡಿನ ಕಲೆಗಳ ಬಾಳು—ಬದುಕು

### ರಾಷ್ಟ್ರದ ಹಿರಿಮೆ

ಒಂದು ರಾಷ್ಟ್ರದ ಹಿರಿಮೆಯನ್ನು ಅದರ ರಾಜಕೀಯ ಆರ್ಥಿಕ ಯೋಜನೆ ಧೋರಣೆಗಳ ಮೇಲೆ ಬೆಲೆ ಕಟ್ಟುವುದಕ್ಕಿಂತಲೂ ಅದರ ಸಾಹಿತ್ಯ, ಕಲಾ ಪ್ರೌಢಿಮೆಯ ಮೇಲೆ ಅಳೆಯುವುದು ವಾಡಿಕೆ. ಇಂದು ಗ್ರೀಕರನ್ನು ನಾವು ನೆನೆಯುವುದು ಅವರ ರಾಜಕೀಯ, ವ್ಯವಸ್ಥೆಗಾಗಿಯಲ್ಲ. ಪ್ರಾಕ್ಸಿಲೈಟಿಸ್‌ನಂತಹ ಶಿಲ್ಪಿ ಸೊಫೋಕ್ಲಿಸ್‌ನಂತಹ ನಾಟ್ಯಕಾರ ಅವರಲ್ಲಿ ಹುಟ್ಟಿ ಜಗತ್ತಿನ ಸಂಸ್ಕೃತಿಯ ಮುನ್ನಡೆಯನ್ನು ಸಾಧಿಸಿದರೆಂದು. ಇಂಗ್ಲೆಂಡ್ ಎಂದರೆ ನಮ್ಮ ಕಣ್ಣುಮುಂದೆ ನಿಲ್ಲುವುದು ಭಾರತ, ದಕ್ಷಿಣ ಆಫ್ರಿಕಾ, ಐರ್ಲೆಂಡುಗಳಲ್ಲಿ ಇಂಗ್ಲಿಷರು ಆಚರಿಸಿದ ರಾಜನೀತಿಯಲ್ಲ: ಷೇಕ್ಸ್‌ಪಿಯರಿನ ನಾಟಕ, ಷೆಲ್ಲಿಯ ಕಾವ್ಯ, ಟರ್ನರನ ಚಿತ್ರಕಲೆ, ರೆನ್ನನ ವಾಸ್ತುಶಿಲ್ಪ. ಮ್ಯಾಸ್‌ಫೀಲ್ಡ್ ಕವಿ ಇವನ್ನು ಸೊಗಸಾಗಿ ವಿವರಿಸಿದ್ದಾನೆ–

“ಕಲೆಯೇ ಜೀವನ. ದೃಷ್ಟಾರರಾದ ಜನರ ಭಾವನೆಯೇ ಕಲೆ. ಕಲೆಗೆ ಉಪೇಕ್ಷೆ ದೊರೆತರೆ ಕಣ್ಣಿಲ್ಲದ ಜನ ಅಧಿಕಾರದಲ್ಲಿದ್ದಾರೆಂದು ಖಚಿತವಾಗುತ್ತದೆ. ಎಲ್ಲಿ ಕಲೆಯ ದೃಷ್ಟಿಯಿಲ್ಲವೋ ಅಲ್ಲಿ ಜನ ನಾಶವಾಗುತ್ತಾರೆ.” ಈ ದೃಷ್ಟಿ ಭಾರತದಲ್ಲಿ ಭವ್ಯವಾಗಿ ಬೆಳೆದಿದ್ದ ಕಾಲವನ್ನೇ ನಾವು ಆದರದಿಂದ ಸ್ಮರಿಸುವುದು. ಗುಪ್ತರ ಸ್ವರ್ಣಯುಗ, ವಿಜಯನಗರದರಸರಕಾಲ, ಮುಘಲರ ವೈಭವದ ದಿವಸಗಳು ಭಾರತ ಇತಿಹಾಸದಲ್ಲಿ ಅಚ್ಚಳಿಯದೆ ನಿಂತಿವೆ. ರಾಜಾಧಿರಾಜರ ರಾಜ್ಯದಾಹವನ್ನು ನಾವು ಮರೆತಿದ್ದೇವೆ. ಆದರೆ ವೇದದ ಕವಿಗಳು, ಕಾಳಿದಾಸ, ಭವಭೂತಿ, ಅಜಂತೆಯ ಚಿತ್ರಗಾರರು, ವೇರೂಳ, ಬಾದಾಮಿಗಳ ಶಿಲ್ಪಿಗಳು, ಪುರಂದರ ವಿಠಲ, ವೆಂಕಟಾಮುಖಿ, ರಾಮ ಅಮಾತ್ಯರಂತಹ ಗಾಯಕರು ನಮ್ಮ ಸ್ಮೃತಿಪಟಲದಲ್ಲಿ ಉಳಿದಿದ್ದಾರೆ. ಇವರ ಭಾವನವೈಶಾಲ್ಯ, ಕೃತಿಕೌಶಲ್ಯಗಳನ್ನೇ ನಾವು “ಭಾರತ ಸಂಸ್ಕೃತಿ” ಎಂದು ಕರೆಯುವುದು.

## ಪರಂಪರೆ

ಅತಿ ವಿಶಾಲವಾದ ಭಾರತ ಇತಿಹಾಸ ಮೊದಲಿಂದಲೂ ನಿರಂತರ ಕದನದ ಕಥೆಯೇ ಆಗಿದೆ. ಒಂದೆಡೆ ಭಾರತದ ಅರಸರ ಒಳಜಗಳ, ಒಂದೆಡೆ ಪರಕೀಯರ ಆಗಮನ, ಆಕ್ರಮಣ. ಈ ಹೋರಾಟಗಳ ವಿಪ್ಲವ ಜೀವನದಲ್ಲಿ ಭಾರತ ತನ್ನ ಸಂಸ್ಕೃತಿಯನ್ನು ಪರಿಪೋಷಿಸಿಕೊಂಡು ಬಂದಿರುವುದೇ ಒಂದು ಅಚ್ಚರಿ. ಹಲವು ಹನ್ನೊಂದು ಭಾಷೆಗಳನ್ನಾಡುವ ಈ ರಾಷ್ಟ್ರವನ್ನು ಒಂದು ಮಹಾ ಸಂಸ್ಕೃತಿಯ ಸೂತ್ರ ಅಚಲವೂ, ಅಮರವೂ ಆದ ಬಂಧನದಲ್ಲಿ ಬಿಗಿದಿದೆ. ನಮ್ಮ ಉತ್ಕರ್ಷ, ಅಪಕರ್ಷಗಳೆರಡಕ್ಕೂ ಈ ಏಕಸೂತ್ರತೆಯೇ ಕಾರಣ.

ಅಮೃತಸರದ ಸಿಖ್‌ದೇವಾಲಯ, ಬೇಲೂರಿನ ಶಿಲ್ಪಸೌಂದರ್ಯ, ತಾಜಮಹಲಿನ ಅಮರಕಾವ್ಯವನ್ನು ಕಂಡು ಯಾವ ಭಾರತೀಯನ ಎದೆಯುಬ್ಬಲಾರದು. ಉಪನಿಷತ್ತಿನ ವಾಣಿ, ಕಾಳಿದಾಸನ ರಸಿಕತೆ, ಆಚಾರ್ಯ ಶಂಕರರ ವಿಚಾರ ವೈಭವಗಳನ್ನು ಕಂಡು, ಕೇಳಿ ಯಾವ ಭಾರತೀಯನ ಹೃದಯ ಹಿಗ್ಗಲಾರದು. ಭವ್ಯವಾದ ಪರಂಪರೆಯಲ್ಲಿ ನಾವು ಬೆಳೆದು

ಬಂದಿದ್ದೇವೆ. ನಾವು ಕಣ್ಣು ತಿರುಗಿಸಿದತ್ತ ಸಹಸ್ರಾರು ವರ್ಷಗಳಿಂದ ಬೆಳೆದು, ಕಾಲನನ್ನೆದುರಿಸಿ ನಿಂತಿರುವ ಸಂಸ್ಕೃತಿ ನಮ್ಮ ಗಮನವನ್ನು ಸೆಳೆಯುತ್ತದೆ. ಇದರಿಂದ ತೃಪ್ತಿ, ಹೆಮ್ಮೆ ನಮ್ಮ ಹೃದಯದಲ್ಲಿ ಮೂಡುತ್ತದೆ. ಈ ತೃಪ್ತಿ ಹೆಮ್ಮೆಗಳೇ ನಮ್ಮ ಅವನತಿಗೆ ಕಾರಣವಾಗಿಲ್ಲವೇ ಎಂದು ಯೋಚಿಸಬೇಕು, ನಮ್ಮ ಸಂಸ್ಕೃತಿ ಪರಂಪರೆ ಬೆಳೆಯುತ್ತಿದೆಯೇ? ಪರಂಪರೆ ನಮ್ಮ ಜೀವನಕ್ಕೆ ಹೊಸ ಹುರುಪನ್ನಿತ್ತು ಅದನ್ನು ಹೆಚ್ಚು ಹೆಚ್ಚಿನ ಕೆಲಸಗಳಿಗೆ ಪ್ರೇರೇಪಿಸುತ್ತಿದೆಯೇ?

## ಸಂಸ್ಕೃತಿಗಳ ಸಮ್ಮಿಳನ

ಪರಂಪರೆಯ ತಂತು ಕಡಿದು ಹೋಯಿತು. ಹೊರಗಿನಿಂದ ಬಂದ ತುರುಕರು ತಳವೂರಿ ಭಾರತದಲ್ಲಿ ನಿಂತು ಸಾಂಸ್ಕೃತಿಕ ವಿನಿಮಯ ಮಾಡಿಕೊಂಡರು. ಹಿಂದೂ ಜೀವನದ ಮೇಲೆ ತಮ್ಮ ನಾಗರಿಕತೆಯ ಅಚ್ಚೊತ್ತಿ, ಹಿಂದುಗಳ ನಾಗರಿಕತೆಯನ್ನು ತಮ್ಮದರಲ್ಲಿ ಕೂಡಿಸಿಕೊಂಡರು. ಉತ್ತರ ಹಿಂದೂಸ್ಥಾನದಲ್ಲಿ ಎರಡು ಸಂಸ್ಕೃತಿಗಳನ್ನು ಬೇರ್ಪಡಿಸಲಾಗದಂತಹ ಸಾಮರಸ್ಯವೇರ್ಪಟ್ಟಿತು. ಈ ಮಿಳನದಿಂದ ಹಿಂದೂಸ್ಥಾನಿ ಸಂಗೀತ, ಇಂಡೊ–ಪರ್ಶಿಯನ್ ಚಿತ್ರಕಲೆ, ಇಂಡೋ–ಸ್ಯಾರಸನಿಕ್ ಶಿಲ್ಪ ಸಂಪ್ರದಾಯಗಳ ಅವತಾರವಾಯಿತು. ಕಬೀರ್, ಗಾಲಿಬ್, ಬೇದಿಲ್ ಮೊದಲಾದ ಕವಿಗಳು ಹುಟ್ಟಿದರು.

ಮುಸಲ್ಮಾನರ ತರುವಾಯ ಬಂದ ಆಂಗ್ಲರಿಗೂ ಭಾರತಕ್ಕೂ ಇಂತಹ ನಿಕಟ ಸಾಂಸ್ಕೃತಿಕ ಬಾಂಧವ್ಯವೇರ್ಪಡಲಿಲ್ಲ. ಅವರ ವೈಪರೀತ್ಯಗಳನ್ನಷ್ಟೇ ಭಾರತ ಅನುಕರಿಸಿ ತನ್ನ ದಾಸ್ಯವನ್ನು ಬಲಪಡಿಸಿಕೊಂಡಿತು. ಭಾರತೀಯ ಕಲೆಗಳು ತಮ್ಮ ನಿರ್ಮಾಣ ಶಕ್ತಿಯನ್ನು ನೀಗಿಕೊಂಡು ಆಂಗ್ಲ ಕಲೆಗಳ ತೊತ್ತುಗಳಾದುವು. ಇದಕ್ಕೆ ಭಾರತದ ದೊಡ್ಡ ನಗರಗಳಲ್ಲಿ ಸಾಲಿಗೆ ನಿಂತಿರುವ ಕಟ್ಟಡಗಳ ಕಲಾಶೂನ್ಯತೆ, ಭಾರತದ ಕಲೆಗಳಿಗುಂಟಾಗಿರುವ ದುರ್ದೆಶೆಗಳೇ ಸಾಕು ನಿದರ್ಶನ.

ಆದರೆ ಆಂಗ್ಲರ ಸಂಪರ್ಕದಿಂದ ನಮ್ಮ ಬಾಳು ವಿಸ್ತೃತವಾಯಿತು. ಷೆಲ್ಲಿ, ಬೈರನ್, ವರ್ಡ್ಸ್‌ವರ್ತ್ ಕವಿಗಳನ್ನೋದಿ, ಮಿಲ್, ಬ್ರೈಟ್,

ಬರ್ಕ್ ಇವರ ಸಂದೇಶಗಳನ್ನು ಕೇಳಿ ವೈಯಕ್ತಿಕ ಜೀವನದಿಂದ ಸಾಂಘಿಕ ಜೀವನದ ಕಡೆ ನಮ್ಮ ಕಣ್ಣು ಹೊರಳಿತು. ಅವರ ಜೀವನಪ್ರಿಯತೆ, ಸಂಘ ಪರಿಜ್ಞಾನ, ಸ್ವಾತಂತ್ರ್ಯಪ್ರೇಮ ನಶಿಸುತ್ತಿದ್ದ ನಮ್ಮ ಬಾಳಿಗೆ ರಾಂಟೆಂಗನ್ ಕಿರಣಚಿಕಿತ್ಸೆಯನ್ನು ಮಾಡಿದವು. ಈ ವಿಚಾರದೃಷ್ಟಿ ನಮ್ಮ ಸಾಹಿತ್ಯ ಕಲೆಗಳ ಮೇಲೂ ಬೀಳಬೇಕು. ಪ್ರತಿಯೊಂದಕ್ಕೂ ಹಿಂದೆ ಹಿಂದೆ ನೋಡಿ ಅದರಲ್ಲಿ ತೃಪ್ತಿಪಟ್ಟುಕೊಂಡು ಕೃತುಶಕ್ತಿಯನ್ನು ಕಳೆದುಕೊಂಡಿರುವ ರಾಷ್ಟ್ರ ಭಾರತವೆಂದು ಬೆವರ್ಲಿ ನಿಕ್ಲಾಸ್ ಹೇಳಿದ ಮಾತು ಅಕ್ಷರಶಃ ನಿಜ. ಹೊರಗಿನವನು ಬಂದು ಈ ಮಾತು ಹೇಳಿದನೆಂದು ಕೋಪಿಸುವುದು ಬೇಡ. ರಾಜರಾಮಮೋಹನರಾಯರೂ, ಸ್ವಾಮಿ ವಿವೇಕಾನಂದರೂ, ಕವಿರವೀಂದ್ರರೂ ಇದೇ ಮಾತುಗಳನ್ನಾಡಿದ್ದಾರೆ. ಕಲೆಯೆಂದರೆ ನಮ್ಮಲ್ಲಿ ಅಜಂತಾ ಇದೆ. ಸಂಗೀತವೆಂದರೆ ತ್ಯಾಗರಾಜ, ತಾನಸೇನರು ಆಗಿ ಹೋಗಿದ್ದಾರೆ. ಸಾಹಿತ್ಯವೆಂದರೆ ಕಾಳಿದಾಸ, ಭವಭೂತಿಗಳು ಸಾಕು ಎನ್ನುವಮನೋಭಾವನೆ ಗ್ಲಾನಿಯ ಚಿನ್ಹೆ. ಅನುಭವ, ಬಾಳನ್ನು ನೋಡುವ ದೃಷ್ಟಿ, ಕಂಡುಂಡದನ್ನು ತಿಳಿಸುವ ಬಗೆ ವ್ಯಕ್ತಿ ವ್ಯಕ್ತಿಗೆ ಕಾಲ ಕಾಲಕ್ಕೆ ಬದಲಾಯಿಸುತ್ತದೆ. ಬಾಳಿನ ಸೊಗಸಿರುವುದು ಈ ವೈವಿಧ್ಯ ದಲ್ಲಿಯೇ. ಸಾಹಿತ್ಯ, ಕಲೆಗಳು ಅಭಿವರ್ಧಿಸುವುದು ಇದರ ಪೋಷಣೆ ಯಲ್ಲಿಯೇ.

## ಕರ್ನಾಟಕ

ಭಾರತದ ಪರಿಸ್ಥಿತಿಯೇ ಹೆಚ್ಚು ಕಡಿಮೆ ಕರ್ನಾಟಕಕ್ಕೆ ಅನ್ವಯಿಸುತ್ತದೆ. ಆದರೆ, ವಂಗ, ಆಂಧ್ರ, ತಮಿಳುನಾಡುಗಳು ಜಾಗೃತಗೊಂಡು ಸ್ವಸ್ವರೂಪದರ್ಶನದ ಕಡೆ ಧಾವಿಸಿವೆ. ಕರ್ನಾಟಕ ಇತ್ತ ಹಳೆಯದನ್ನು ಸರಿಯಾಗಿ ತಿಳಿಯದೆ, ಹೊಸದನ್ನು ನಿರ್ಮಿಸುವ ಚೇತನವನ್ನು ಕಳೆದುಕೊಂಡು ತೊಳಲಾಡುತ್ತಿದೆ. ಇಂದು ಕರ್ನಾಟಕವನ್ನೆಲ್ಲಾ ಹೊಕ್ಕು ಬಳಸಿ ನೋಡಿದರೆ ಅದರ ವೈಶಿಷ್ಟವನ್ನು ಕಾಣಿಸುವ ಕಲಾ ಕೃತಿಗಳನ್ನು ಕಾಣುವುದಕ್ಕಾಗುವುದಿಲ್ಲ.

## ಚಿತ್ರಕಲೆ

ಕಳೆದ ಶತಮಾನದಂತ್ಯದಲ್ಲಿ ಕಲ್ಕತ್ತೆಯ ಕಲಾಶಾಲೆಯ ಪ್ರಾಧ್ಯಾಪಕರಾಗಿ ಬಂದ ಇ. ವಿ. ಹ್ಯಾವಲ್‌ರವರು ಅಲ್ಲಿ ಪ್ರಚಾರದಲ್ಲಿದ್ದ ಶಿಕ್ಷಣ ಕ್ರಮವನ್ನು ಬದಲಾಯಿಸಿದರು. ಶಾಲೆಯ ವಿದ್ಯಾರ್ಥಿಗಳು ಗ್ರೀಕ್ ಶಿಲ್ಪಗಳ ಮಾದರಿಗಳ ಪ್ರತಿ ಮಾಡುವುದು, ಇಂಗ್ಲಿಷ್ ಫ್ರೆಂಚ್ ಚಿತ್ರಕಾರರ |ಕೃತಿಗಳನ್ನು ಅನುಸರಿಸುವುದು ನಾಡಿಗೆ ಶ್ರೇಯಸ್ಕರವಲ್ಲವೆಂದು ಬಗೆದು ಅವರು ಅಜಂತಾ, ಬಾಗ್, ರಜಪೂತ ಸಂಪ್ರದಾಯಗಳ ಮಾದರಿಗಳನ್ನೂ ವಿದ್ಯಾರ್ಥಿಗಳ ಮುಂದಿಟ್ಟರು. ಪ್ರಾಚೀನವನ್ನು ಬಿಡದೆ ಅರ್ವಾಚೀನಕ್ಕೆ ಹೇಗೆ ಸೇವೆಮಾಡಬಹುದೆಂಬುದನ್ನು ಅವನೀಂದ್ರನಾಥ ಠಾಕೂರರು ತೋರಿಸಿಕೊಟ್ಟರು. ಅವರ ಶಿಷ್ಯರಾದ ನಂದಲಾಲ ಬಸು, ಪ್ರಮೋದ ಕುಮಾರ ಚಟರ್ಜಿ, ಅಸಿತ ಕುಮಾರ ಹಲ್ದಾರ್, ದೇವಿ ಪ್ರಸಾದ ರಾಯ್ ಚೌಧುರಿ ಮೊದಲಾದವರು ಭಾರತೀಯ ಕಲೆಗಳ ವಿವಿಧ ಭಂಗಿಗಳನ್ನು ಹಿಡಿದು ತಮ್ಮ ಪ್ರತಿಭೆಯ ಅಚ್ಚೊತ್ತಿ ಸ್ವತಂತ್ರ ಮಾರ್ಗಗಳನ್ನು ನಿರ್ದೇಶಿಸಿಕೊಂಡರು. ನವೋದಯ ಎಲ್ಲೆಡೆಯಲ್ಲಿಯೂ ತನ್ನ ಪ್ರಭಾವವನ್ನು ಬೀರುತ್ತ ಬಂದಿತು. ಆಂಧ್ರ ಜಾತೀಯ ಕಲಾಶಾಲೆಗೆ ಪ್ರಮೋದಕುಮಾರ ಚಟರ್ಜಿಯವರನ್ನು ಬರಮಾಡಿಕೊಂಡರು. ಲಕ್ನೋ ಕಲಾಶಾಲೆಗೆ ಅಸಿತ ಕುಮಾರ ಹಲ್ದಾರರನ್ನು ಕರೆಸಿಕೊಂಡರು, ಮದರಾಸಿನ ಕಲಾಶಾಲೆಗೆ ದೇವಿ ಪ್ರಸಾದರನ್ನು ಆಹ್ವಾನಿಸಿದರು. ಈ ಪ್ರಾಂತ್ಯಗಳಲ್ಲಿ ಸುಪ್ತವಾಗಿದ್ದ ಕಲೆ ಜಾಗೃತವಾಯಿತು. ಆಂಧ್ರದಲ್ಲಿ ದಾಮರ್ಲಾ ರಾಮರಾವ್, ಸತ್ಯನಾರಾಯಣ, ಬುಚ್ಚಿ ಕೃಷ್ಣಮ್ಮ, ಗುರ್ರಂ ಮಲ್ಲಯ್ಯ, ಅಡಿವಿ ಬಾಪಿರಾಜು ಮೊದಲಾದವರು ಪ್ರಮೋದ ಕುಮಾರರ ನೇತೃತ್ವದಲ್ಲಿ ಆಂಧ್ರ ಕಲಾ ಸಂಪ್ರದಾಯವೊಂದನ್ನು ಆರಂಭಿಸಿದರು. ಇದೇ ಜಾಗೃತಿ ಲಕ್ನೋ, ಮದರಾಸುಗಳಲ್ಲಿಯೂ ಕಂಡು ಬಂತು. ಕನ್ನಡಿಗರು ಹಿಂದುಳಿದರು. ಅವನೀಂದ್ರನಾಥ ಠಾಕೂರರ ಶಿಷ್ಯರಾಗಿದ್ದು ಭಾರತದ ಶ್ರೇಷ್ಠ ಚಿತ್ರಕಾರರಲ್ಲಿ ಒಬ್ಬರಾದ ಕೆ. ವೆಂಕಟಪ್ಪನವರು ಶಾಂತಿನಿಕೇತನ ಶಾಲೆಯಲ್ಲಿ ಕಲಾಭ್ಯಾಸಕ್ಕೆ ಹೋಗಿದ್ದ ನಾರಾಯಣ ಸಂಗಮ, ಹಂಜಿ ರುದ್ರಪ್ಪ,

ಮಾರ್ತಾಂಡ ಜೋಶಿ ಇವರು ಕನ್ನಡನಾಡಿನಲ್ಲಿ ನವೋದಯವನ್ನು ಮಾಡ ಬಹುದಾಗಿತು. ಎಲ್ಲರೂ ತೆಪ್ಪಗೆ ಕುಳಿತರು.

ಈ ವಿಚಾರದಲ್ಲಿ ಮೈಸೂರು ಬಹಳ ಮುಂದುವರಿಯಬೇಕಾಗಿತ್ತು ಆಳಿದ ಮಹಾಸ್ವಾಮಿಯವರಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಮನಸ್ಸಿನಲ್ಲಿ ಈ ವಿಚಾರ ಬಂದಿರದಿರಲಿಲ್ಲ. ಜಗನ್ಮೋಹನ ಚಿತ್ರಶಾಲೆಯಲ್ಲಿ ಅವರು ಆಧುನಿಕ ಚಿತ್ರಕಾರರ ದಿವ್ಯ ಕೃತಿಗಳನ್ನು ಸಂಗ್ರಹಿಸಿದರು. ಕೆ. ವೆಂಕಟಪ್ಪನವರು ಕಲ್ಕತ್ತೆಗೆ ಹೋಗಿ ಚಿತ್ರಕಲೆಯನ್ನು ಕಲಿತುಬರಲು ನೆರವಾದವರೂ ಮಹಾಸ್ವಾಮಿಯವರೇ. ಇತ್ತ ಸರಕಾರದ ಉಪೇಕ್ಷೆ, ಅತ್ತ ಜನತೆಯ ಆಲಸ್ಯ-ಎರಡೂ ಕೂಡಿ ಮೈಸೂರಿನಲ್ಲಿ ಚಿತ್ರಕಲೆ ಎಷ್ಟು ಮುಂದು ವರಿಯಬೇಕಾಗಿತ್ತೋ ಅಷ್ಟು ಮುಂದುವರಿಯಲಿಲ್ಲ, ಚಾಮರಾಜೇಂದ್ರ ಟೆಕ್ನಿಕಲ್ ಇನ್ಸ್ಟಿಟ್ಯೂಟಿನಲ್ಲಿರುವ ಚಿತ್ರಕಲಾ ವಿಭಾಗ ಓಬೀರಾಯನ ಕಾಲದ್ದು. ಅಲ್ಲಿನ ಶಿಕ್ಷಕರು, ಪದ್ಧತಿ ಎಲ್ಲಾ ಹ್ಯಾವಲ್‌ರವರು ಹೋಗು ವುದಕ್ಕೆ ಮೊದಲಿದ್ದ ಕಲ್ಕತ್ತೆಯ ಪರಿಸ್ಥಿತಿಯನ್ನು ನೆನಪಿಗೆ ತರುತ್ತದೆ. ಆ ಶಾಲೆಯಲ್ಲಿ ಚಿತ್ರಕಲೆ ಕುಶಲಕಲೆಗಳ ಒಂದು ಅಂಗ. ಭರಣಿಗಳ ಮೇಲೆ ಗೊಂಬೆ ಬರೆಯುವುದಕ್ಕೆ, ಅರಗಿನ ಆಟಗೆಗಳ ಮೇಲೆ ಚಿತ್ರ ಕೊರೆಯು ವುದಕ್ಕೆ, ಕೆತ್ತನೆಯ ಕೆಲಸಗಳಿಗೆ ಅನುಕೂಲಗಳನ್ನೊದಗಿಸುವುದಕ್ಕೆ ಎಷ್ಟು ಚಿತ್ರಕಲಾಭ್ಯಾಸ ಅವಶ್ಯಕವೋ ಅಷ್ಟು ಅಲ್ಲಿ ದೊರೆಯುತ್ತಿದೆ. ಆ ಶಾಲೆ ಯಿಂದ ಇದುವರೆಗೆ ಹೆಸರು ಹೇಳುವಂತಹ ಪ್ರಥಮ ದರ್ಜೆಯ ಒಬ್ಬ ಚಿತ್ರ ಕಾರ ಬಂದಿಲ್ಲ.

ಕರ್ಣಾಟಕದಲ್ಲಿ ಚಿತ್ರಕಲೆ ಕ್ರಿ. ಶ. ೨—೩ ನೆಯ ಶತಮಾನಗಳಿಂದ ಬೆಳೆದು ಬಂದಿದೆ. ಬಾದಾಮಿ, ವಿಜಾಪುರ, ಇಟ್ಟಗಿ, ಮೈಸೂರುಗಳಲ್ಲಿ ಕಾಲಕಾಲಕ್ಕೆ ಚಿತ್ರಕಲೆ ಬೆಳೆಯಿತು. ಬಾದಾಮಿ ಕಮಾನುಗಳ ಭಿತ್ತಿಚಿತ್ರ ಗಳನ್ನು ಜಗನ್ಮಾನ್ಯ ಕಲಾ ವಿಮರ್ಶಕರು ಕೊಂಡಾಡಿದ್ದಾರೆ. ಮೈಸೂರಿ ನಲ್ಲಿಯೇ ಒಂದು ಸ್ವತಂತ್ರ ಸಂಪ್ರದಾಯ ಮುಮ್ಮಡಿ ಕೃಷ್ಣರಾಜ ಒಡೆಯ ರವರ ಕಾಲದಲ್ಲಿ ಬೆಳೆಯಿತು. ಬೇಲೂರು, ಹಳೆಯಬೀಡು, ವಿಜಯನಗರ, ಇಟ್ಟಗಿ, ಬಾದಾಮಿಗಳ ಶಿಲ್ಪಕೃತಿಗಳು ಸ್ವತಂತ್ರ ಕನ್ನಡ ಸಂಪ್ರದಾಯದ ಹೆಗ್ಗುರುತುಗಳಾಗಿವೆ. ಇವುಗಳನ್ನೂ ಸರಿಯಾಗಿ ಅಳವಡಿಸಿಕೊಂಡು,

ಇವುಗಳಿಂದ ಸ್ಫೂರ್ತಿಪಡೆದು ಕನ್ನಡ ಸಂಪ್ರದಾಯವೊಂದನ್ನು ಧಾರಾಳ ವಾಗಿ ಬೆಳೆಸಬಹುದು. ಕೆ. ವೆಂಕಟಪ್ಪನವರು, ವಿಣಾಜಿಗಿ ಮುಡಿವಾಳಪ್ಪ ನವರು, ಕಮಡೋಳಿಯವರು, ದಿವಂಗತ ಆರ್ ವ್ಯಾಸರಾವ್ ಅವರು ಈ ದೃಷ್ಟಿಯಲ್ಲಿ ಕೆಲಸಮಾಡಿದ್ದಾರೆ. ಅದರವುಗಳನ್ನು ಸಂಘಟಿಸಿ 'ಶಾಂತಿ ನಿಕೇತನ'ದ ಕಲಾಶಾಲೆಯ ಮಾದರಿಯಲ್ಲಿ ಒಂದು ಕಲಾಶಾಲೆಯನ್ನು ತೆರೆಯಬೇಕು. ಕಮಡೋಳಿಯವರು ತಮ್ಮ ಕಲೆಯಲ್ಲಿ ನವೀನ ದೃಷ್ಟಿ ಯನ್ನು ಮೂಡಿಸಿದ್ದಾರೆ. ಸಾಮಾನ್ಯ ಜನತೆಯ ಜೀವನವನ್ನು ಕಲೆಯ ಸುಂದರ ಅಚ್ಚಿನಲ್ಲಿ ತುಂಬಿದ್ದಾರೆ. ಈ ಮೂವ್ವರ ನೇತೃತ್ವದಲ್ಲಿ ಮೈಸೂರು ಒಂದು ಕಲಾಶಾಲೆಯನ್ನು ತೆರೆದರೆ ಕನ್ನಡನಾಡಿಗೆ ಹಿರಿಯ ಸೇವೆ ಮಾಡಿ ದಂತಾಗುತ್ತದೆ.

## ಕುಶಲ ಕಲೆಗಳು

ಲಲಿತ ಕಲೆಗಳ ಜತೆಗೆ ಕುಶಲಕಲೆಗಳೂ ಬೆಳೆಯಬೇಕು. ಕನ್ನಡ ನಾಡಿನಲ್ಲಿಯೇ ಹಳೆಯ ಮನೆಗಳನ್ನು ಹೊಕ್ಕು ನೋಡಿದರೆ ಪ್ರತಿಯೊಂದು ಪದಾರ್ಥವೂ ಕಲಾಮಯವಾಗಿರುವುದನ್ನು ಕಾಣಬಹುದು. ನಂದಾದೀಪ, ಆರತಿಯ ತಟ್ಟೆ, ತಾಂಬೂಲದ ತಟ್ಟೆ, ನಿತ್ಯ ಉಪಯೋಗಿಸುವ ಬಟ್ಟಲು ಗಳು, ಅಡಿಕೆ ಕತ್ತರಿ, ಮರದ ಸಾಮಾನುಗಳು ಎಲ್ಲವೂ ಸುಂದರವಾಗಿರು ತ್ತಿದ್ದವು. ಕಲೆಯೆಂದರೆ ನಾಲ್ಕು ಜನ ಶ್ರೀಮಂತರು ಅನುಭವಿಸುವ ವಸ್ತುವಲ್ಲ. ಜೀವನದೊಂದಿಗೆ ಉಸಿರಿನಂತೆ ಹೊಂದಿಕೊಂಡಿರುವ ವಸ್ತು ವೆಂಬ ಕಲ್ಪನೆ ಕನ್ನಡಿಗರಿಗೆ ಇತ್ತು. ಇಂದು ಅವುಗಳ ಸ್ಥಾನದಲ್ಲಿ ಅಲ್ಯೂ- ಮಿನಿಮ್ ಸಾಮಾನುಗಳೂ, ಅಂದ ಆಕಾರವಿಲ್ಲದ ಕಂಚಿನ ಪಾತ್ರೆಗಳೂ, ಯಂತ್ರಗಳಲ್ಲಿ ತಯಾರಾದ ಪದಾರ್ಥಗಳೂ ಬಂದುಬಿಟ್ಟಿವೆ. ಕಲೆಯ ಪುನರುಜ್ಜೀವನದ ಕಡೆಗೆ ಲಕ್ಷ್ಯ ಕೊಡುವವರು ಜೀವನವನ್ನು ಕಲಾಮಯ ಮಾಡುವ ಸಾಧನಗಳನ್ನು ಪೂರ್ಣವಾಗಿ ಗಮನಿಸಬೇಕು.

## ಸಂಗೀತ

ಕರ್ನಾಟಕ ಸಂಗೀತಕ್ಕೆ ಬಹಳ ಹೆಸರು ಪಡೆದಿದೆ. ದಕ್ಷಿಣಾದಿ ಸಂಪ್ರ ದಾಯವನ್ನು 'ಕರ್ಣಾಟಕ ಪದ್ಧತಿ' ಯೆಂದು ಕರೆಯುವುದು ವಾಡಿಕೆ

ಯಾಗಿದೆ. ಸಂಗೀತ ಶಾಸ್ತ್ರ ನಿರ್ದೇಶ ಮಾಡಿದ ಅನೇಕ ಪಂಡಿತರು ಕನ್ನಡ ನಾಡಿನವರು. ವಿಜಯನಗರದರಸರ ಕಾಲದಲ್ಲಿ ಕನ್ನಡ ಸಂಗೀತ ವಿಶೇಷ ಪ್ರಾಗಲ್ಭ್ಯ ಸ್ಥಿತಿಗೆ ಬಂದಿತು. ನಿಜಗುಣ ಶಿವಯೋಗಿಯಿಂದ ಅರಂಭವಾದ ಹಾಡುಗಬ್ಬ ಪದ್ಧತಿ ಕನ್ನಡನಾಡಿನಲ್ಲಿ ಸಾರೋದ್ಧಾರವಾಗಿ ಬೆಳೆಯಿತು. ಶೈವ ಸಂಪ್ರದಾಯವನ್ನನುಸರಿಸಿದ ಮುಪ್ಪಿನ ಷಡಕ್ಷರಿ, ಸಪ್ಪಣ್ಣಸ್ವಾಮಿ, ಘನಮಠಾರ್ಯ, ಬಾಲಲೀಲಾ ಮಹಂತಸ್ವಾಮಿ, ನಂಜುಂಡ ಶಿವಯೋಗಿ ಮೊದಲಾದ ಹಲವು ಶರಣರು ಹಾಡುಗಬ್ಬಗಳ ಹೊಳೆಯನ್ನು ಹರಿಸಿದರು. ವೈಷ್ಣವ ಸಂಪ್ರದಾಯವನ್ನನುಸರಿಸಿದ ವಿಜಯ ವಿಠಲದಾಸ, ಪುರಂದರ, ಕನಕದಾಸ, ದೇವರ ನಾಮುಗಳನ್ನೂ, ಶಾಸ್ತ್ರೀಯ ಸಂಗೀತಕ್ಕಳವಡುವ ಉಗಾಭೋಗಗಳನ್ನೂ ಸಾವಿರಗಟ್ಟಳೆ ರಚಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಯಕ್ಷಗಾನ, ತಾಳಮದ್ದಳೆಗಳಲ್ಲಿ ಕರ್ನಾಟಕ ಸಂಗೀತ ಪದ್ಧತಿ ಬೆಳೆಯಿತು. ಅದರಿಂದು 'ಕರ್ನಾಟಕ ಸಂಗೀತ' ಹೆಸರಿಗೆ ಮಾತ್ರ ಉಳಿದಿದೆ. ತಮಿಳು ನಾಡಿನ ಗಾಯಕರು-ಅವರು ಹಾಡುವುದು ತ್ಯಾಗರಾಜ, ದೀಕ್ಷಿತರ ಕೃತಿಗಳು, ಇವರ ಹಾಡನ್ನೇ ಅನುಸರಿಸುತ್ತಿರುವ ಮೈಸೂರಿನ ಸಂಗೀತ ಗಾರರು !

ಹಿಂದಿನಿಂದ ಬೆಳೆದು ಬಂದ ಶೈವ, ವೈಷ್ಣವ, ಶರಣರ, ಸಂತರ ಕೀರ್ತನೆಗಳನ್ನು ಪುನರುಜ್ಜೀವನಗೊಳಿಸಬೇಕಾದುದಗತ್ಯವಾಗಿದೆ. ಜನ ಪದದ ವಿಶ್ವವಿದ್ಯಾನಿಲಯಕ್ಕೆ ಅವೇ ಬುನಾದಿ. ಇದರ ಜತೆಗೆ ಇಂದಿನ ಅಭಿರುಚಿ, ಆಸೆ ಆಶಯಗಳನ್ನು ಪ್ರತಿಬಿಂಬಿಸುವ ಸಂಗೀತ ಮಾರ್ಗವೂ ಬೆಳೆಯಬೇಕು. ಮೂರು ನಾಲ್ಕು ಗಂಟೆಗಳ ಕಾಲ ಶಿವನನ್ನು, ವಿಷ್ಣುವನ್ನು ಮೊರೆಯಿಟ್ಟು ಮನುಷ್ಯ ತನ್ನ 'ದಾಸೋಹಂ ಭಾವ'ವನ್ನು ಸಾರುವ ಸಂಗೀತದಿಂದ ನಮಗೆ ತೃಪ್ತಿಯಿಲ್ಲ. ನಮ್ಮ—ಜೀವನಕ್ಕೆ ಈ ಕರುಣ-ಶೋಕ ರಸಗಳು ಸಾಲವು. ಶೃಂಗಾರಬೇಕು—ವೀರಬೇಕು-ಅದ್ಭುತಬೇಕು, ಬೇರೆ ಬೇರೆ ರಸಾನುಭವ ಸಂಗೀತದ ಮೂಲಕ ನಮಗಾಗಬೇಕು. ಶೃಂಗಾರ ವನ್ನೂ ಸಂಗೀತದಲ್ಲಿ ಪ್ರತಿಬಿಂಬಿಸುವುದಕ್ಕೆ ಜಾವಡಿಯ ಪದ್ಧತಿಯೊಂದು ನಮ್ಮಲ್ಲಿ ಪ್ರಸಾರದಲ್ಲಿತ್ತು. ಆದರೆ ಅದು ವೇಶ್ಯೆಯರ ಪಾಲಾಗಿ ಇಂದು ನಾಮಾವಶೇಷವಾಗಿದೆ. ನಮ್ಮ ಸಂಗೀತದಲ್ಲಿ ಭಕ್ತಿಯರೋದನವೊಂದೇ

18

ಇದ್ದರೆ ಸಾಲದು-ನಿಸರ್ಗದ ಬಗೆಬಗೆಯ ಒಲವು ಚೆಲುವು ಗೆಲುವುಗಳು ಕಾಣಬೇಕು. ಪ್ರಕೃತಿಯ ಅದ್ಭುತ ಶಕ್ತಿಯನ್ನು ಬೀಥೋವನ್, ವ್ಯಾಗ್ನರ್ ತಮ್ಮ ಗೀತೆಗಳಲ್ಲಿ ತೋರಿಸಿರುವಂತೆ, ಪ್ರಕೃತಿಯ ಒಲವು ಚೆಲುವುಗಳನ್ನು ಬಾಕ್, ಮೊಜಾರ್ಟ್ ಸಾರಿರುವಂತೆ ನಮ್ಮ ಗೀತಾರಚಕರೂ ಸಾರಬೇಕು. ಈ ದೃಷ್ಟಿಯಲ್ಲಿ ಕನ್ನಡ ಕವಿವರ್ಯರಲ್ಲಿ ಒಬ್ಬರಾದ ವಿ. ಸೀತಾರಾಮಯ್ಯ ನವರು ಕೆಲಸಮಾಡಿದ್ದಾರೆ. 'ಭಾರತಿ' ಯವರು ರಾಷ್ಟ್ರೀಯ ಗೀತೆಗಳನ್ನು ಬರೆದು ಸಂಗೀತಕ್ಕೆ ಅಳವಡಿಸಿದ್ದಾರೆ. ಸಂಗೀತರತ್ನ ವಾಸುದೇವಾ ಚಾರ್ಯರು, ವೈಣಿಕಪ್ರವೀಣ ವೆಂಕಟಗಿರಿಯಪ್ಪನವರು, ದಿವಂಗತ ಎಸ್. ರಾಮರಾಯರು ಕನ್ನಡದಲ್ಲಿ ಕೀರ್ತನೆಗಳನ್ನು ಬರೆದಿದ್ದಾರೆ. ತಮಿಳು ಕೀರ್ತನೆಗಳನ್ನೇ ಕಛೇರಿಗಳಲ್ಲಿ ಹಾಡುವ ಕ್ರಮವನ್ನು ತಮಿಳು ನಾಡವರು ಪ್ರಚಾರಕ್ಕೆ ತಂದ ಹಾಗೆ ಕನ್ನಡಿಗರು ಉಗ್ರಚಳುವಳಿಯನ್ನು ಕೈಗೊಳ್ಳ ಬೇಕು. ಕನ್ನಡದ ಸಂಗೀತ ಪದ್ಧತಿಯನ್ನು ಪರಿಷ್ಕರಿಸಿ, ಹೊಸ ಮಾರ್ಗ ಗಳನ್ನು ನಿರ್ದೇಶಿಸುವುದಕ್ಕೆ ಆಸ್ಥಾನ ವಿದ್ವಾನ್ ಹುಲುಗೂರು ಕೃಷ್ಣಾ ಚಾರ್ಯರು, ತಟ್ಟೆ ಶಾಮರಾಯರು, ರಾಮದಾಸರು ಮೊದಲಾದ ಶಾಸ್ತ್ರಜ್ಞ ರನ್ನೂ, ವಿ. ಸೀತಾರಾಮಯ್ಯನವರು, ಭಾರತೀಯವರು, ಯೋಗಾ ನರಸಿಂಹಯ್ಯನವರು ಮೊದಲಾದ ಸಂಗೀತ, ಸಾಹಿತ್ಯ ನಿಪುಣರನ್ನೂ ವಾಸುದೇವಾಚಾರ್ಯರು, ವೆಂಕಟಗಿರಿಯಪ್ಪನವರು, ಮಲ್ಲಿಕಾರ್ಜುನ ಮನ್ ಸೂರ್, ದೇಶಪಾಂಡೆ ಗುರುರಾಯರು, ಬಿ. ದೇವೇಂದ್ರಪ್ಪನವರು, ಡಿ. ಸುಬ್ಬರಾಮಯ್ಯನವರು, ವೀಣೆ ರಾಜಾರಾಯರು ಮೊದಲಾದ ವಿದ್ವಾಂ ಸರುಗಳನ್ನೊಳಗೊಂಡ ಸಮಿತಿಯೊಂದನ್ನೇರ್ಪಡಿಸಬೇಕು. ಸಮಿತಿ ಕೀರ್ತನೆಗಳ ರಚನೆ, ಹಾಡುವ ವಿಧಾನದ ನಿಯೋಜನೆಗಳನ್ನು ಮಾಡಿ ಕನ್ನಡ ಸಂಗೀತದ ವ್ಯಾಪ್ತಿಯನ್ನು ಬೆಳೆಸಬೇಕು.

## ನಾಟಕ

ಕನ್ನಡನಾಡಿಗೆ ಪ್ರಾಚೀನ ನಾಟಕ ಸಾಹಿತ್ಯವಿಲ್ಲ. ನಾಟಕಕ್ಕೆ ಒಂದು ಅಸ್ತಿತ್ವ ಬಂದದ್ದು ದಿವಂಗತ ಚಾಮರಾಜ ಒಡೆಯರ ಕಾಲದಲ್ಲಿ. ಅವರು ಇಂಗ್ಲಿಷ್, ಸಂಸ್ಕೃತ ಸಾಹಿತ್ಯಗಳಲ್ಲಿನ ಉತ್ತಮ ನಾಟಕಗಳನ್ನು

ಕನ್ನಡಕ್ಕೆ ಅನುವಾದಮಾಡಿಸಿ ಪ್ರದರ್ಶನ ಮಾಡಿಸುತ್ತಿದ್ದರು. ಸ್ವತಂತ್ರ ಮಾರ್ಗವನ್ನೂ ನಿರ್ದೇಶಿಸಿ ನಾಟಕ ಸಾಹಿತ್ಯ, ಕಲೆಗಳನ್ನು ಬೆಳೆಯಿಸಿ ಕನ್ನಡನಾಡಿನ ನಾಟಕಕಲೆಯ ಕೀರ್ತಿ ಎಲ್ಲೆಡೆಯಲ್ಲಿಯೂ ಮೊಳಗುವಂತೆ ಮಾಡಿದವರು ದಿವಂಗತ ನಾಟಕ ಶಿರೋಮಣಿ, ಎ. ವಿ. ವರದಾಚಾರ್ಯರು.* ಹೊಸ ಪ್ರಯೋಗಗಳನ್ನು ನಡಸಿ, ಅವುಗಳನ್ನು ತಮ್ಮ ಅದ್ಭುತ ಕಲಾಶಕ್ತಿಯಿಂದ ಪ್ರದರ್ಶಿಸಿದವರು ದಿವಂಗತ ಮಹಮ್ಮದ್ ಪೀರ್ ಸಾಹೇಬರು. ನಾಟ್ಯವಿಲಾಸಿಗಳಲ್ಲಿ ಟಿ. ಪಿ. ಕೈಲಾಸಂ ಅವರು ಕನ್ನಡದಲ್ಲಿ ಹೊಸ ರಂಗಭೂಮಿಯನ್ನೇ ನಿರ್ಮಾಣಮಾಡಿದರು. ಆದರೆ ಈ ಪ್ರಯತ್ನಗಳಿಗೆ ಒಂದು ಸಂಘಟಿತ ಸ್ವರೂಪ ಬರಲಿಲ್ಲ. ವರದಾಚಾರ್‍ಯರು, ಪೀರರು ನಿಧನರಾದನಂತರ ಅವರ ರಂಗಭೂಮಿ ಕಣ್ಮರೆಯಾಯಿತು. ಒಬ್ಬ ವ್ಯಕ್ತಿಯ ಪ್ರತಿಭೆಯ ಮೇಲೆ ನಿಲ್ಲುವ ಎಲ್ಲ ಸಂಸ್ಥೆ, ತತ್ವಗಳ ಪಾಡೂ ಇದೇ ಆಗುತ್ತದೆ. ಇಂದಿನ ನೋಟ ವೈಯಕ್ತಿಕ ನೋಟವಲ್ಲ, ಸಾಮೂಹಿಕ ನೋಟ. ಜನತೆಯ ಸರ್ವತೋಮುಖ ಜೀವನದ ಪ್ರತಿಬಿಂಬವಾಗಬೇಕು ರಂಗಭೂಮಿ.

ಕನ್ನಡನಾಡಿನಲ್ಲಿ ರಂಗಭೂಮಿ ಹಿಂದೆ ಬೀಳುವುದಕ್ಕೆ ಟಾಕಿಗಳ ಅವಾಂತರವೂ ಕಾರಣವಾಯಿತು. ನಾಟ್ಯ ಮಂದಿರಗಳೆಲ್ಲಾ ಸಿನಿಮಾ ನಿಲಯಗಳಾದವು. ಸರ್ಕಾರದಿಂದ ಬಗೆಬಗೆಯ ಸೌಕರ್ಯಗಳನ್ನು ಪಡೆದು ನಾಟಕ ಮಂದಿರಗಳನ್ನು ಕಟ್ಟಿದ ನಾಟಕ ಸಂಘಗಳ ಒಡೆಯರೇ ಅವುಗಳನ್ನು ಗುಜರಾತಿ ಸಿನಿಮಾ ಸಂಚಾಲಕರಿಗೆ ಪಸಾಯನದಾನ ಕೊಟ್ಟರು.

ರಂಗಭೂಮಿ ಕೇವಲ ವಿಲಾಸದ ಸಾಧನವಲ್ಲ. ಅದು ಜನತೆಯ ಶಿಕ್ಷಣ ಕ್ಷೇತ್ರ. ಜಗತ್ತಿನ ಮಹಾಕವಿಗಳಾದ ಷೇಕ್ಸಪಿಯರ್, ಮೋಲಿಯರ್, ಇಬ್ಸನ್, ಷಾ ರಂಗಭೂಮಿಯ ಮಕ್ಕಳು. ರಂಗಭೂಮಿಯನ್ನು ಉಳಿಸಬೇಕಾದದ್ದು ನಾಡವರೆಲ್ಲರ ಪವಿತ್ರ ಕರ್ತವ್ಯ.

---

* ವರದಾಚಾರ್ಯರ ಸ್ಮಾರಕ ಕಲಾ ಸಂಘದವರು ಆಡುತ್ತಿರುವ ನಾಟಕಗಳನ್ನು ನೋಡಿ ವರದಾಚಾರ್ಯರ ಬೆಲೆ ಕಟ್ಟಬಾರದಾಗಿ ವಿನಂತಿ.

ಇದಕ್ಕೆ ಕನ್ನಡ ನಾಡಿನ ಪ್ರಮುಖ ಪಟ್ಟಣಗಳಾದ ಬೆಂಗಳೂರು, ಮೈಸೂರು, ಮಂಗಳೂರು, ಉಡುಪಿ, ಮಡಿಕೇರಿ, ಹುಬ್ಬಳ್ಳಿ, ಗದಗು, ಬಳ್ಳಾರಿ, ವಿಜಾಪುರ, ಸೊಲ್ಲಾಪುರ ಬೆಳಗಾಂವಿಗಳಲ್ಲಿ ಮ್ಯುನಿಸಿಪಾಲಿಟಿಯವರು ನಾಟಕ ಶಾಲೆಯನ್ನು ಕಟ್ಟಿಸಿ, ನಾಟಕ ಕಲೆಯನ್ನು ಪ್ರೋತ್ಸಾಹಿಸಬೇಕು. ಇಂಗ್ಲೆಂಡ್, ಫ್ರಾನ್ಸ್‌ಗಳಲ್ಲಿ ಮುನಿಸಿಪಲ್ ನಾಟಕಶಾಲೆಗಳು ಪ್ರಸಾರದಲ್ಲಿವೆ. ಈ ನಾಟಕಶಾಲೆಗಳನ್ನು ನಾಟಕಗಳಿಗೇ ಮೀಸಲಾಗಿಟ್ಟು ಕನ್ನಡ ನಾಟ್ಯೋಪಜೀವಿಗಳೂ, ವಿಲಾಸಿಗಳೂ ಹೊಸಹೊಸ ಪ್ರಯೋಗ ಮಾಡುವುದಕ್ಕೆ ನೆರವಾಗಬೇಕು.

ನೃತ್ಯ, ಸಂಗೀತ, ಚಿತ್ರಕಲೆ, ಶಿಲ್ಪ, ನಾಟಕಕಲೆಗಳೆಲ್ಲದರ ಉತ್ಕರ್ಷಕ್ಕಾಗಿ ಒಂದು "ಕನ್ನಡ ಕಲಾ ಪರಿಷತ್ತು" ("Academy of Karnataka Arts") ಸ್ಥಾಪಿತವಾಗಬೇಕು. ಇದಕ್ಕೆ ಕನ್ನಡನಾಡಿನ ಎಲ್ಲ ಮ್ಯುನಿಸಿಪಾಲಿಟಿಗಳೂ, ಸರ್ಕಾರಗಳೂ, ಆಶ್ರಿತ ಸಂಸ್ಥಾನಗಳೂ ನೆರವಾಗಬೇಕು. ಕನ್ನಡ ಕಲೆಗಳ ಬೆಳವಣಿಗೆಗೆ ನಾನಾ ವಿಧದಲ್ಲಿ ನೆರವಾದ ಮೈಸೂರು ಅರಮನೆ ಈ ಕೆಲಸವನ್ನೂ ಕೈಗೊಂಡಲ್ಲಿ ಶ್ರೇಯಃಪದವಾಗುತ್ತದೆ. ಪರಿಷತ್ತಿನಲ್ಲಿ ತಜ್ಞರು ಕಲೆಗಳನ್ನು ಬೆಳಸುವುದಲ್ಲದೆ, ಸಂಶೋಧನೆಗೂ ಅನುಕೂಲವೊದಗಿಸಿ ಕಾಲಗರ್ಭದೊಳಡಗಿರುವ ಹಸ್ತಪ್ರತಿಗಳನ್ನು ತೆಗೆದು ಪ್ರಕಟಿಸಬೇಕು. ಮೈಸೂರು ಓರಿಯಂಟಲ್ ಲೈಬ್ರರಿಯೊಂದರಲ್ಲಿಯೇ ನೃತ್ಯ, ಸಂಗೀತ, ನಾಟಕಗಳಿಗೆ ಸಂಬಂಧಪಟ್ಟ ಹಲವು ಹಸ್ತಪ್ರತಿಗಳಿವೆ. ಕೆ. ವೆಂಕಟಪ್ಪನವರೂ, ಶಿಲ್ಪಸಿದ್ಧಾಂತಿ ಶಿದ್ಧಲಿಂಗ ಸ್ವಾಮಿಗಳೂ ಚಿತ್ರಕಲೆ, ಶಿಲ್ಪಗಳ ಬಗ್ಗೆ ಹಲವು ಹಸ್ತಪ್ರತಿಗಳನ್ನೂ ಸಂಗ್ರಹಿಸಿದ್ದಾರೆ. ಹುಡುಕಿದರೆ ಕನ್ನಡನಾಡಿನ ಹಳ್ಳಿಪಳ್ಳಿಗಳಲ್ಲಿಯೂ ಹಸ್ತಪ್ರತಿಗಳು ದೊರೆಯುತ್ತವೆ. ಪರಿಷತ್ತಿನಲ್ಲಿ ಒಂದು ಪ್ರಯೋಗಶಾಲೆ (Laboratory) ಏರ್ಪಟ್ಟು, ಪ್ರಾಚೀನ ಗ್ರಂಥಗಳು ಸೂಚಿಸುವ ಬಣ್ಣಗಳನ್ನೂ, ಸಂಗೀತ ವಾದ್ಯಗಳನ್ನೂ ರಚಿಸಬೇಕು.

ಪರಿಷತ್ತಿನ ನಿರ್ಮಾಣದ ಬಗ್ಗೆ ಕನ್ನಡ ದೇಶಾಭಿಮಾನಿಗಳೂ, ಕಲಾಭಿಮಾನಿಗಳೂ, ಜನಾಭಿಪ್ರಾಯವನ್ನು ಬೆಳಸಿ ಉಚಿತ ಕಾರ್ಯಕ್ರಮ

ವನ್ನು ಕೂಡಲೆ ಕೈಗೊಳ್ಳಬೇಕು. ಕನ್ನಡನಾಡು ಸಾಹಿತ್ಯ, ರಾಜ ಕಾರಣಗಳಲ್ಲಿ ಮುಂದುವರಿಯುತ್ತಿರುವಂತೆ ಕಲೆಗಳಲ್ಲಿಯೂ ಮುಂದುವರಿದು ಭಾರತದ ಹಾಗೂ ಜಗತ್ತಿನ ಸಂಸ್ಕೃತಿಯಲ್ಲಿ ತನ್ನ ಸ್ಥಾನವನ್ನಲಂಕರಿಸು ವಂತೆ ನಾವು ಪ್ರಯತ್ನಿಸದಿದ್ದಲ್ಲಿ ಕರ್ತವ್ಯಚ್ಯುತಿಯ ಅಪರಾಧಕ್ಕೆ ಗುರಿ ಯಾಗುತ್ತೇವೆ.

ವಿಶ್ವಕರ್ಣಾಟಕ ರಜತಸಂಚಿಕೆ ೧೯೪೫.

---

## ೩೫. ಯಾರ ಊರುಭಂಗ?

ಈ ವರ್ಷದ "ಉಷಾ" ಪತ್ರಿಕೆಯ ದೀಪಾವಳಿ ಸಂಚಿಕೆಗೆ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಒಂದು ಲೇಖನ ಬರೆದಿದ್ದಾರೆ. ಲೇಖನದ ವಸ್ತು ಮೂರು ಸಾಹಿತಿಗಳ ಟೀಕೆ. ಟೀಕೆಗೆ ಪ್ರತಿಟೀಕೆ. ವಾದಕ್ಕೆ ಪ್ರ ವಾದ ಬರುವುದರಲ್ಲಿ ನಮ್ಮ ಅಭ್ಯಂತರವೇನೂ ಇಲ್ಲ. ಆದರೆ ಟೀಕ ವಾದ ಸತ್ಯಪ್ರಿಯತೆಯಿಂದ ಕೂಡಿರಬೇಕು, ಇದನ್ನು ಗಾಂಧಿ ಸಾಹಿ ಭಕ್ತರಿಂದ ನಾವು ನಿರೀಕ್ಷಿಸುವುದು ಪ್ರಾಯಶಃ ಅನ್ಯಾಯವಾಗಲಾರದು

ಲೇಖನದಲ್ಲಿ ಶರ್ಮರ ಟೀಕೆ ಮೀಸಲಾಗಿರುವುದು ನಮ್ಮ ಲೇಖ ಭಾಷಣಗಳ ಮೇಲೆ, ಪ್ರಗತಿಶೀಲರ ಮೇಲೆ, ಪ್ರಗತಿಶೀಲರ ವಿಚಾ ವಾಹಿನಿಯ ಮೇಲೆ. ಪ್ರಗತಿಶೀಲ ಸಾಹಿತ್ಯದ ಧ್ಯೇಯಧೋರಣೆಗಳ ವಿಶೇಷ ಚರ್ಚೆಗೊಳಗಾಗಿರುವಾಗ ಈ ಹಕ್ಕನ್ನು ಶರ್ಮರಿಂದ ಕಸುಕೊಳ್ಳ ಯಾರೂ ಇಚ್ಛಿಸುವುದಿಲ್ಲ. ಆದರೆ ಅವರು ಸ್ವತಂತ್ರ ವಿಚಾರಗಳನ್ನು ಮಂಡಿಸಬೇಕೆಂದೂ, ಉಭಯ ಪಕ್ಷಗಳ ವಾದಸರಣಿಯನ್ನು ಅರ್ಥಮಾಡಿ ಕೊಳ್ಳಬೇಕೆಂದೂ ನಿರೀಕ್ಷಿಸುವುದು ತಪ್ಪಲ್ಲ.

"ಪ್ರಗತಿಶೀಲರಿಗೆ ಪ್ರಗತಿಪರವಾದ ಹತ್ತು ಕೃತಿ ನಿರ್ಮಾಣ ಮಾಡ ವುದಕ್ಕಿಂತ ಅದು ಪ್ರಗತಿ, ಇದು ಪ್ರಗತಿಯಲ್ಲ ಎಂಬ ವಾದ ಹೆಚ್ಚು ಪ್ರಿಯ ವಾಗಿದೆ ಇದನ್ನು ಬೆಳೆಸು ಎಂಬುದಕ್ಕಿಂತ ಅದನ್ನು ಸುಡು ಎನ್ನುತ್ತೇವೆ...... ಇದನ್ನೇ ನಾನು ಸನ್ನಿಪಾತವೆಂದು ಕರೆಯುವುದು—ಈ ಉಲ್ಬಣ

ನಿಲ್ಲಬೇಕು ; ಇಲ್ಲವಾದರೆ ಬುದ್ಧಿವಂತರ ಸಮಾಜ ಹುಚ್ಚರ ಆಸ್ಪತ್ರೆಯಾಗುತ್ತದೆ. ಕಂಡಕಂಡವರನ್ನು ಸುಮ್ಮನೆ ತಿವಿಯುವುದರಲ್ಲಿ ಏನಿದೆ ಗಂಡುಗಾರಿಕೆ ?"

ಎಂದು ಶರ್ಮರ ಕೋರಿ. ಗಾರ್ಕಿ, ರಸಋಷಿ, ಪ್ರಗತಿಶೀಲ ಸಾಹಿತ್ಯ, ಭಾರತ ಶಕ್ತಿ, ಜೀವನ ಸಂಗ್ರಾಮ, ನನ್ನನ್ನು ನಾನು ಕಂಡೆ, ತಲೆಹರಟೆ ಮೊದಲಾದ ಕೃತಿಗಳನ್ನು ಪ್ರಗತಿಶೀಲ ಲೇಖಕರ ಸಂಘ (ಬೆಂಗಳೂರು) ಪ್ರಕಟಿಸಿದೆ. ಕನ್ನಡನಾಡಿನ ಎಲ್ಲಾ ಭಾಗಗಳಿಂದ ಪ್ರಗತಿಶೀಲ ಸಾಹಿತ್ಯದ ಧ್ಯೇಯ ಧೋರಣೆಗಳನ್ನೊಪ್ಪಿಕೊಂಡ ಸಾಹಿತಿಗಳು ಉತ್ತಮ ಕೃತಿಗಳನ್ನು ರಚಿಸುತ್ತಿದ್ದಾರೆ. ಸಂಘದ ನಿಯೋಜನೆ ಜನತೆಯ ಮುಂದಿದೆ. ಪ್ರಗತಿಶೀಲ ಸಾಹಿತಿಗಳು ಕೇವಲ ಮಾತುಗಾರರಲ್ಲ ಕರ್ಮನಿಷ್ಠರೆಂಬುದನ್ನು ಸಿದ್ಧಮಾಡಿ ತೋರಿಸಿಕೊಟ್ಟಿದ್ದಾಗಿದೆ. ನಿರಾಶೆಯ ವಾದದಲ್ಲಿ ತೊಡಗಿ, ಪರಿಸ್ಥಿತಿಯ ಪ್ರಭಾವಕ್ಕೆ ಆಹುತಿಯಾಗಿ ಮುಂದೇನು ಎಂದು ಕುಳಿತಿದ್ದ ಸಾಹಿತ್ಯರಂಗಕ್ಕೆ ಹೊಸ ಧೈರ್ಯ, ಕಾವು, ಚೇತನ ಪ್ರಗತಿಶೀಲ ಸಾಹಿತ್ಯದಿಂದ ಒದಗಿದೆ. ಇದನ್ನು ನಿರ್ಲಕ್ಷಿಸಿ ಹತ್ತು ಉತ್ತಮ ಕೃತಿ ಬಂದಿಲ್ಲ ; ಇದೆಲ್ಲಾ ಸನ್ನಿಪಾತ ಎಂದು ಸಾರುವ ಶರ್ಮರ ವಾದಸರಣಿಗೆ ಯಾವ ಬೆಲೆ ಕೊಡಬೇಕು ?

ಶರ್ಮರ ಆಕ್ಷೇಪ ನಾವು ಮಾಸ್ತಿ ಮೊದಲಾದವರನ್ನು ವಿಮರ್ಶೆ ಮಾಡಿದೆವೆಂದು. ಪರಿಷತ್ತಿನಲ್ಲಿ ನಡೆದ ಪ್ರಗತಿಶೀಲ ಸಾಹಿತ್ಯ ವಿಚಾರ ಗೋಷ್ಠಿಯಲ್ಲಿ ಮಾತನಾಡುತ್ತಾ ತ. ರಾ. ಸು. ಅವರು ಮಾಸ್ತಿಯವರ ಸುಬ್ಬಣ್ಣ ಉತ್ತಮ ಗದ್ಯಕಾವ್ಯ. ಆದರೆ ಇಂದು ನಮ್ಮ ಜನತೆಗೆ ಬೇಕಾಗಿರುವುದು ವಿಚಾರವನ್ನು ಕೆರಳಿಸಿ, ಮನುಷ್ಯತ್ವವನ್ನು ಉಂಟುಮಾಡುವ ಸಾಹಿತ್ಯ ಎಂದು ಹೇಳಿದರು. ಇದು ಹಿರಿಯರ ಬೈದಾಟವಂತೆ ! ಸದಾ ಸ್ತುತಿಗೇ ಶರಣಾಗುವ ಹಿರಿಯರೂ ಅವರ ಹಿಮ್ಮೇಳಕಾರರಾದ ಶರ್ಮರೂ ಸ್ವತಂತ್ರವಿಚಾರಧಾರೆಗೆ ಅಡ್ಡಿ ಆತಂಕಗಳನ್ನು ತಂದೊಡ್ಡುತ್ತಿದ್ದಾರೆ. ಓದುಗನಿಗೆ ಸುಬ್ಬಣ್ಣ ಉತ್ತಮ ಕೃತಿಯಲ್ಲವೆನಿಸಿದರೆ ಆ ಮಾತು ಹೇಳುವ ಅಧಿಕಾರ ಅವನಿಗಿಲ್ಲವೇ ? ಹತ್ತು ಜನ ಮಿತ್ರರು ಒಂದು ನೋಟದಲ್ಲಿ ನೋಡಿ, ಒಂದು ಕೃತಿಯನ್ನು ಎತ್ತಿ ಹಿಡಿದಾಕ್ಷಣ ಅದನ್ನು ಸದಾಕಾಲ

ಜನ ಹೊಗಳುತ್ತ ಕೂಡಬೇಕೇ? ತಮ್ಮ ಅನುಭವ, ವಿಚಾರ, ಆಶಯಗಳ ಕಸೋಟಿಯ ಮೇಲೆ ತಿಕ್ಕಿ ನೋಡಬಾರದೇ? ರಾಜಕಾರಣದಲ್ಲಿ ಚೆಲ್ಲಾಟ ವಾಡುತ್ತಿರುವ ಶರ್ಮರು ಅಲ್ಲಿ ತೋರುವ ಸರ್ವಾಧಿಕಾರ ಮನೋಭಾವ ವನ್ನೇ ಸಾಹಿತ್ಯರಂಗದಲ್ಲಿಯೂ ಮೂಡಲೆತ್ನಿಸುತ್ತಿದ್ದಾರೆ. ಮೈಸೂರಿನ ರಾಜಕಾರಣ ಕದಡಿಹೋಗಿರುವಂತೆ ಸಾಹಿತ್ಯರಂಗವೂ ಕದಡಿ ಹೋಗ ಬೇಕೆಂದು ಬಯಸುತ್ತಾರೆ. ಇದಕ್ಕೆ ಯಾವ ವಿಚಾರಶೀಲನೂ ಸಮ್ಮತಿಸ ಲಾರ. ಹಿರಿಯರ ಅಪಮಾರ್ಗದಿಂದ ಕುಂಠಿತವಾಗಿರುವ ನಮ್ಮ ಸಾಹಿತ್ಯ, ಜೀವನ ಶೂನ್ಯಸ್ಥಿತಿಯನ್ನು ಪಡೆಯುವುದಕ್ಕೆ ನಾವಾದರೂ ಒಪ್ಪಲಾರೆವು. ಬೇಂದ್ರೆಯವರ "ಗಂಗಾವತರಣ"ವನ್ನು ಟೀಕಿಸಿದ್ದು ನಮ್ಮ ಮೊದಲ ನೆಯ ತಪ್ಪು. ಉಮರ್ ಖಯ್ಯಾಂನ ಪದ್ಯಗಳನ್ನು ಅನುವಾದ ಮಾಡಿದ್ದು ಎರಡನೆಯ ತಪ್ಪು. ಗಂಗಾವತರಣದಲ್ಲಿ ನಾವು ಮೆಚ್ಚದಿರುವುದು ಅಗೋ ಚರವಾದ ದೈವವಾದ—ಆತ್ಮಶಕ್ತಿಯನ್ನು ಮರೆತ ಕವಿ ಅಗೋಚರ ಶಕ್ತಿಯ ನೆರವನ್ನು ಬಯಸುತ್ತಾನೆ. ಹೈತುಕವಾದಿಯಾದ ಉಮರ್ ಅದಕ್ಕೆ ಪ್ರತಿ ಯಾಗಿ ಮಾನವನ ಅಂತರ್ಗತವಾದ ದೈವಿಕತೆಯ ಪರಿಚಯ ಮಾಡಿಕೊಡು ತ್ತಾನೆ. ಮಾನವನಿಗೆ ಆತ್ಮಾವಲಂಬನದ ಘನಸಂದೇಶವನ್ನು ನೀಡುತ್ತಾನೆ. ನಮ್ಮ ಜನಕ್ಕೆ ಇಂದು ಬೇಕಾದುದೇನು? ಬೇಂದ್ರೆಯವರ ದೈವವಾದವೇ ಉಮರನ ಮಾನವವಾದವೇ? ಶರ್ಮರು ಬೇಂದ್ರೆಯವರನ್ನು, ಉಮರ ನನ್ನು ಒಂದೇ ಮಣೆಯ ಮೇಲೆ ಕೂಡಿಸಲೆತ್ನಿಸುತ್ತಿದ್ದಾರೆಯೋ? ವ್ಯಕ್ತಿ ಅಭಿಮಾನವನ್ನು ಬಿಟ್ಟು ಶರ್ಮರು ಈ ಎರಡು ಕೃತಿಗಳನ್ನು ಓದಿನೋಡಲಿ- ಉಮರನ ವಿಚಾರ ವೈಭವವನ್ನು ಅರ್ಥಮಾಡಿಕೊಳ್ಳಲೆತ್ನಿಸಲಿ. ಆಗ ನಮ್ಮ ವಾದವೈಖರಿ ಅವರಿಗೆ ಅರ್ಥವಾಗುತ್ತದೆ.

ಶರ್ಮರು ತಮ್ಮ ಬರೆಹಗಳಲ್ಲಿ ವಿಚಾರಶಕ್ತಿಗಿಂತಲೂ ಮಾತಿನ ಮಂಟಪವನ್ನೇ ಹೆಚ್ಚು ಕಾಣಿಸುತ್ತಾರೆ. ಆದರೆ ಅವರ ಮಾತುಗಳು ಅವರಿಗೇ ಅನ್ವಯಿಸುತ್ತವೆಂಬುದನ್ನು ಮರೆಯುತ್ತಾರೆ.

"ನಮ್ಮ ಸಾಹಿತ್ಯ ಮಾರ್ಗ ಕವಿಮಾರ್ಗವಲ್ಲ, ಶಿಲ್ಪಮಾರ್ಗವಲ್ಲ, ಸ್ವರ್ಣಕಾರನ ಮಾರ್ಗ, ಅವನ ಕೆಲಸ ಕಲೆಯಲ್ಲ, ಕೂಲಿ. ನಾವು ಯಾವುದೋ ಸೆಳವಿಗೆ ಸಿಕ್ಕಿ, ಯಾವುದೋ ಕೀರ್ತಿಯ ಕನಸಿಗೆ ಕೈಯೊಡ್ಡಿ

ದಾರಿ ತಪ್ಪುತ್ತಿದ್ದೇವೆ. ಕಾವ್ಯಮಾರ್ಗ ಜೀವನಮಾರ್ಗವಾಗಬೇಕು. ಉಪಜೀವನ ಜೀವನೋಪಾಯಗಳ ದಾರಿಯಾಗಬಾರದು. ನಮ್ಮ ಬರವಣಿಗೆ ದಿನದಿನಕ್ಕೆ ನಮ್ಮ ವಾಙ್ಮಯ ತಪಸ್ಸಿನ ಹಂತಗಳನ್ನು ತುಳಿಸಬೇಕು. ವಿರಸ್ಯ, ಕಟುತನ, ಕಹಿಯೇ ನಮ್ಮ ಕೈಗಂಬವಾದೀತೆ? ಗಾಂಧೀಜಿ ಹೇಳುವ ಹಾಗೆ ಕವಿಯಾಗ ಬಯಸುವವನು ಶಬ್ದಕ್ರೀಡೆ ಮಾಡಿದರೆ ಸಾಲದು, ನಿಗ್ರಹವನ್ನು ಕಲಿಯಬೇಕು. ಕ್ರೋಧವನ್ನು ಅಡಗಿಸಿ ಕರುಣೆಯನ್ನು ಮಿಡಿಯಬೇಕು."

ಸಾಹಿತ್ಯವನ್ನು ಒಂದು ತಪಸ್ಸೆಂದು ಭಾವಿಸಿ ದುಡಿಯುತ್ತಿರುವ ನಮಗೆ ಈ ಉಪದೇಶ ಬೇಕಿಲ್ಲ, ಶರ್ಮರು ತಮ್ಮ ಉಪದೇಶವನ್ನು ಅನುಷ್ಠಾನಕ್ಕೆ ತರಲೆತ್ನಿಸಲಿ. ಅಹಿಂಸೆ, ಸತ್ಯ, ಗಾಂಧೀಜಿ ಮೊದಲಾದ ಶಬ್ದಗಳನ್ನು ದುರುಪಯೋಗಪಡಿಸುತ್ತಿರುವ ಶರ್ಮರು ತಮ್ಮ ರಾಜಕೀಯ, ಸಾಮಾಜಿಕ ಸಾಹಿತ್ಯ ಜೀವನಗಳನ್ನೇ ಒಳಹೊಕ್ಕು ನೋಡಲಿ. ಪರೋಪದೇಶ ಪಾಂಡಿತ್ಯ ಸಾಕು.

ಗಾಂಧೀಜಿಯವರ ಹೆಸರನ್ನು ಎತ್ತಿಕೊಳ್ಳದಿದ್ದರೆ ಶರ್ಮರಿಗೆ ತಮ್ಮ ವಾದಕ್ಕೆ ಬಲವಿಲ್ಲವೆಂಬುದು ಚೆನ್ನಾಗಿ ಗೊತ್ತು.

"ಸಾಮ್ಯವಾದಿಗಳಿಗೆ ಸಾಮ್ಯವಾದದ ಸಿದ್ಧಾಂತವನ್ನು ಜನಮೆಚ್ಚುವಂತೆ ಹೇಳಿ ಅವರ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಿಂತ ಗಾಂಧೀಜಿ ಸೈತಾನನ ಮುತ್ಸದ್ದಿ ಎನ್ನುವುದರಲ್ಲಿ ರಭಸ ಹೆಚ್ಚು. ಗಾಂಧೀಜಿ ಬಿರ್ಲಾ—ಬಜಾಜರ "ಏಜಂಟು" ಅನ್ನುವ ಗುಡುಗು ಸಿಡಲಿನಲ್ಲಿ ಸಾವು ಸ್ಟಾಲಿನ್ನಿನ ಸಿಪಾಯಿಗಳು ಎಂದು ಅವರು ಅಂದಾರಲ್ಲ ಎಂಬುದೂ ನಮಗೆ ಹೊಳೆದಿಲ್ಲ."

ಸತ್ಯದ ವಿಪರ್ಯಾಸ ಮಾಡುವುದರಲ್ಲಿ ಕೃಷ್ಣಶರ್ಮರು ಮಿಸ್ ಮೇಯೋ, ಬೆವರ್ಲಿ ನಿಕ್ಲಾಸ್, ಆಬೆ ಡೂಬ್ವಾ ಅವರನ್ನು ಮೀರಿಸಿದ್ದಾರೆ. ಪ್ರಗತಿಶೀಲರು (ಅವರನ್ನೇ ಸಾಮ್ಯವಾದಿಗಳು ಎಂದು ಶರ್ಮರು ಕರೆಯುತ್ತಿರುವುದು) ಗಾಂಧೀಜಿಯವರನ್ನು ಸೈತಾನನ ಮುತ್ಸದ್ದಿ ಎನ್ನುತ್ತಾರೆಂದು ಅಪಪ್ರಚಾರಕ್ಕೆ ಹೊರಟಿದ್ದಾರೆ. ಗಾಂಧೀಜಿಯವರ ಬಗ್ಗೆ ಪ್ರಗತಿಶೀಲರ ಅಭಿಪ್ರಾಯಕ್ಕೆ ಓದುಗರು "ಪ್ರಗತಿಶೀಲರ ಸಾಹಿತ್ಯ ಪುಟ ೧೧ ಇಂಗ್ಲೀಷ್

ಮುನ್ನುಡಿ ಮತ್ತು "ನನ್ನನ್ನು ನಾನೇ ಕಂಡೆ" ಪುಟ ೫೪-೫೫ ನೋಡ ಬೇಕು. ಭಾರತದ ಕಲ್ಯಾಣ ಮಾತ್ರವಲ್ಲ—ಜಗತ್ತಿನ ಕಲ್ಯಾಣವೂ ಗಾಂಧೀಜಿಯವರಿಂದಲೇ ಶಕ್ಯ ಎಂದು ನಾವೂ ಇತರ ಪ್ರಗತಿಶೀಲ ಸಾಹಿತಿಗಳೂ ಒತ್ತಿಯೊತ್ತಿ ಹೇಳುತ್ತ ಬಂದಿದ್ದೇವೆ. ಪ್ರಗತಿಶೀಲ ಸಾಹಿತಿಗಳು ಶರ್ಮರಂತೆ ಗಾಂಧೀಜಿಯವರನ್ನೂ ಅವರ ಸಾಹಿತ್ಯವನ್ನೂ ಕಂಟ್ರಾಕ್ಟ್ ತೆಗೆದುಕೊಂಡಿದ್ದೇವೆಂದು ಪ್ರದರ್ಶನ ಮಾಡದಿರಬಹುದು. ಆದರೆ ಆ ಮಹಾವ್ಯಕ್ತಿಯ ಬಗ್ಗೆ ಪ್ರಗತಿಶೀಲರ ಗೌರವ, ಪ್ರೇಮ ಯಾರಿಗೂ ಕಡಿಮೆಯಾದುದಲ್ಲ.

ಸಾಮ್ಯವಾದವೇ ನಮ್ಮ ರಾಷ್ಟ್ರದ ಮಹಾವ್ಯಾಧಿಗಳಿಗೆ ಮದ್ದು ಎಂದು ಪ್ರಗತಿಶೀಲರು ನಂಬಿದ್ದಾರೆ. ಆದರವರು ಸ್ಟಾಲಿನ್ನನ ಏಜಂಟರಂತೆ ಮಾತನಾಡುತ್ತಿಲ್ಲ. ಅಂಧರಂತೆ ರಷ್ಯಾ, ಜರ್ಮನಿ, ಇಂಗ್ಲೆಂಡ್ ಯಾವ ದೇಶದ ರೀತಿನೀತಿಯನ್ನೂ ಅನುಸರಿಸಬೇಡಿ. ಭಾರತವರ್ಷದ ರಾಜಕಾರಣ ವಿಚಾರ ಆದರ ಮಣ್ಣಿನಿಂದಲೇ ಒಗೆಯಬೇಕೆಂದು ಸಾರಿಸಾರಿ ಹೇಳುತ್ತಿದ್ದಾರೆ. ಪ್ರಗತಿಶೀಲರು ರಷ್ಯಾದ ಅನುಯಾಯಿಗಳಲ್ಲ, ಸ್ಟಾಲಿನ್ನನ ಏಜಂಟರಲ್ಲ ಎಂಬುದನ್ನು ಅವರು ಜಗತ್ತಿಗೇ ತೋರಿಸಿಕೊಡಲು ಸಿದ್ಧರಾಗಿದ್ದಾರೆ. ಆದರೆ ಶರ್ಮರು ತಾವು ಬಂಡವಾಳಗಾರರ ಏಜಂಟರಲ್ಲ ಎಂಬುದನ್ನು ತೋರಿಸಿಕೊಡಲು ಸಿದ್ಧರಾಗಿದ್ದಾರೆಯೇ ? ಮೊನ್ನೆ ತಾನೆ (೧೮-೧೧-೪೫) ಪರಿಷನ್ಮಂದಿರದಲ್ಲಿ ನಡೆದ ಸಣ್ಣ ಕಥೆಗಾರರ ಸಮ್ಮೇಳನದಲ್ಲಿ ಭಾಷಣಮಾಡುತ್ತಾ ಉದ್ದಕ್ಕೂ ಶರ್ಮರು ಬಂಡವಾಳಗಾರರ ಪರ ವಾದಿಸಿದ್ದು ಆಶ್ಚರ್ಯವಲ್ಲ. ಬಂಡವಾಳಗಾರರ ರಕ್ಷಣೆ, ಪೋಷಣೆಗಳು ತಮ್ಮ ಮೇಲೆ ಬಿದ್ದಿರುವ ಗುರುತರ ಜವಾಬ್ದಾರಿಯೆಂಬಂತೆ ಶರ್ಮರು ಮಾತನಾಡಿದರು. ಈ ಮನೋಭಾವಕ್ಕೂ ಗಾಂಧೀವಾದಕ್ಕೂ ಯಾವ ಸಾಮಂಜಸ್ಯ-ಯಾವ ತಾಳಮೇಳ ? ಪ್ರಗತಿಶೀಲರು ಬಂಡವಾಳಶಾಹಿಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಾರೆ. ನಮ್ಮ ನಾಡಿನ ಹಲವು ಸಮಸ್ಯೆಗಳಿಗೆ ಕಾರಣರು ಬಂಡವಾಳಗಾರರೆಂಬುದು ಅವರ ಅಭಿಮತ. ಅಹಿಂಸೆಯ ಪಾಂಚಜನ್ಯವನ್ನು ಹಿಡಿದಿದ್ದೇವೆಂದು ಹೇಳಿಕೊಳ್ಳುವ ಶರ್ಮರು ಒಮ್ಮೆ ಸ್ಪಷ್ಟವಾಗಿ ಬಂಡವಾಳಶಾಹಿಯನ್ನು ಖಂಡಿಸಲಿ ತಾತಾ ಕಂಪೆನಿಯ

ದತ್ತಪುತ್ರರಾಗಿರುವ ವಿೂನೂ ಮಸಾನಿಯವರ ಶಿಷ್ಯರು ತಾವಲ್ಲ ಎಂದು ಹೇಳಲಿ. ಬಂಡವಾಳಶಾಹಿಗಳಿಗೂ ತಮಗೂ ಯಾವ ಸಂಬಂಧವೂ ಇಲ್ಲ ವೆಂದು ಸಿದ್ಧಮಾಡಿಕೊಡಲಿ.

ರಾಜಕೀಯ ರಂಗದಲ್ಲಿ ಶ್ರೀ ಶರ್ಮರು ಅನುಸರಿಸಿದ ನೀತಿಯನ್ನು ನಾವು ಬಲ್ಲೆವು. ಕನ್ನಡ ಗಡಿನಾಡುಗಳ ಸಮಸ್ಯೆ ಬಂದಾಗ ಇವರು ಬಳ್ಳಾರಿಯಲ್ಲಿ ತೆಲುಗನ್ನು ಎತ್ತಿ ಹಿಡಿದುದನ್ನು ನಾವು ಬಲ್ಲೆವು. ಈಗ ಪ್ರಗತಿಶೀಲರಮೇಲೆ ಜನತೆಯಲ್ಲಿ ಅವಿಶ್ವಾಸ ಹುಟ್ಟಿಸಲು ಹೂಡಿರುವ ತಂತ್ರಮೂಲವನ್ನು ಬಲ್ಲೆವು. ಆದರೆ ಜನತೆ ಶರ್ಮರು ತಿಳಿದಿರುವಷ್ಟು ಮೂಢರಲ್ಲ. ಗಾಂಧೀಜಿಯ ಅಮರಸಂದೇಶ, ಕಾಂಗ್ರೆಸಿನ ಘನ ಬಲಿದಾನ, ಯುದ್ಧದ ಭೀಕರ ಪರಿಣಾಮ ಜನತೆಯಲ್ಲಿ ಅಭೂತಪೂರ್ವ ಜಾಗೃತಿಯನ್ನುಂಟುಮಾಡಿದೆ. ಇಂಗ್ಲೀಷಿನ ಒಂದು ಗಾದೆಯನ್ನೇ ಉಪಯೋಗಿಸಿಕೊಂಡು ಹೇಳಬೇಕೆಂದರೆ, "ಒಬ್ಬನನ್ನು ಸದಾಕಾಲ ಮುಬ್ಬುಗೊಳಿಸಬಹುದು. ಎಲ್ಲರನ್ನೂ ಸ್ವಲ್ಪಕಾಲ ಮಬ್ಬುಗೊಳಿಸಬಹುದು. ಆದರೆ ಎಲ್ಲರನ್ನೂ ಎಲ್ಲಾಕಾಲವೂ ಮುಬ್ಬುಗೊಳಿಸಲು ಸಾಧ್ಯವಿಲ್ಲ." ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರಿಗೆ ಗಾದೆಯ ಪೂರ್ಣಾರ್ಥ ಅರಿವಾಗುತ್ತದೆಂಬುದರಲ್ಲಿ ನಮಗೆ ಸಂದೇಹವೇ ಇಲ್ಲ.

ಸುಗ್ಗಿಯ ಮೈಸೂರು ೯-೧೨-೪೫

---

## ೩೬. ಸ್ಥಾನಪತಿಗಳ ಉಪದೇಶ

ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವ ಭಾಷಣ ಮಾಡಲು ಕಳೆದ ವರ್ಷ ಆಮಂತ್ರಿತರಾದ ಸರ್. ಎ. ರಾಮಸ್ವಾಮಿ ಮೊದಲಿಯಾರವರು ಬರದಿರಲು ಆ ಗುರುತರ ಕಾರ್ಯಭಾರ ಸ್ಥಾನಪತಿಗಳಾದ ರಾಜಧರ್ಮಪ್ರಸಕ್ತ ಟಿ. ಸಿಂಗಾರವೇಲು ಮೊದಲಿಯಾರರವರ ಮೇಲೆ ಬಿತ್ತು. ಶ್ರೀ ಸಿಂಗಾರವೇಲು ಮೊದಲಿಯಾರರವರು ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾಗಿದ್ದವರು, ಬಹಳ ಕಾಲ ಅಮಾತ್ಯ ಮಿರ್ಜಾ ಅವರ ಆಪ್ತ

ಸಚಿವರಾಗಿದ್ದವರು. ಅವರ ಭಾಷಣದಲ್ಲಿ ನಾವು ಕನ್ನಡಪ್ರೇಮ, ನ್ಯಾಯನಿಷ್ಠುರತೆಗಳನ್ನು ಸಹಜವಾಗಿ ನಿರೀಕ್ಷಿಸುತ್ತೇವೆ.

ಸ್ಥಾನಪತಿಗಳ ಭಾಷಣ ವಿಶ್ವವಿದ್ಯಾನಿಲಯದ ವಾರ್ಷಿಕ ವರದಿಯ ಸಂಕ್ಷೇಪರೂಪ. ಅದರ ಬಗ್ಗೆ ನಮ್ಮ ಆಕ್ಷೇಪಣೆಯೇನೂ ಇಲ್ಲ. ಆದರೆ ರಾಜಧರ್ಮಪ್ರಸಕ್ತರು ಕನ್ನಡ, ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ಎರಡು ಮುಖ್ಯ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ.

ಕನ್ನಡದ ಮಾತೆತ್ತುವ ಸಂದರ್ಭಗಳಲ್ಲಿ ರಾಜಧರ್ಮಪ್ರಸಕ್ತರ ಧೋರಣೆ ಹೇಗಿದೆ ಎಂಬುದು ಈ ವಾಕ್ಯಗಳಿಂದ ವಿದಿತವಾಗುತ್ತದೆ.

> "ನಮ್ಮ ವಿಶ್ವವಿದ್ಯಾನಿಲಯದ ನಿಯೋಜನೆಯಲ್ಲಿ ಕನ್ನಡದಲ್ಲಿ ಮಾತ್ರವಲ್ಲದೆ ಇತರ ದೇಶಭಾಷೆಗಳಲ್ಲಿಯೂ ವ್ಯವಸ್ಥಿತ ಶಿಕ್ಷಣ ಕೊಡುವ ಅವಕಾಶವಿದೆ."

> "ಭಾಷೆಗೆ (ಕನ್ನಡಕ್ಕೆ) ಕಾಲಕ್ಷೇಪಗಳು, ಬಹುಮಾನಗಳು, ಜ್ಞಾನ ವಿಸ್ತಾರ ಭಾಷಣ ನಿಯೋಜನೆ, ಪ್ರಕಟನೆಗಳ ಮೂಲಕ ವಿಶೇಷ ಪ್ರೋತ್ಸಾಹ ಕೊಡಲಾಗುತ್ತಿದೆ."

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಈಗಾಗಲೇ ವಿಶೇಷ ಪ್ರೋತ್ಸಾಹ ಕೊಡಲಾಗುತ್ತಿದೆ ; ಇನ್ನು ಹೆಚ್ಚು ಬೆಳಸುವುದು ಯುಕ್ತವಲ್ಲ ಎಂಬ ಧ್ವನಿ ಅವರ ಭಾಷಣದ ಉದ್ದಕ್ಕೂ ಕಂಡು ಬರುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮ ಆಚರಣೆಯಲ್ಲಿ ಬರಬೇಕೆಂದು ನಡೆಯುತ್ತಿರುವ ಚಳುವಳಿಗೆ, ಪ್ರಜಾಮತಕ್ಕೆ ಯಶ ದೊರೆಯದಂತೆ ಸ್ಥಾನಪತಿಗಳು ಕುಂಟು ನೆಪಗಳನ್ನು ಹೂಡಲೆತ್ನಿಸಿರುವುದು ಕಂಡು ಬರುತ್ತದೆ.

"ಶಿಕ್ಷಣದ ಉದ್ದೇಶ ಆತ್ಮಜ್ಞಾನಾರ್ಜನೆ. ಆತ್ಮಜ್ಞಾನವನ್ನು ಸಾಧಿಸಿರಿ. ಅನಕ್ಷರಜ್ಞರಾದ ನಿಮ್ಮ ನಿರ್ಭಾಗ್ಯ ಸೋದರ ಸೋದರಿಯರಿಗೆ ತಿಳಿವನ್ನು ನೀಡಿ" ಎಂದು ಉಪದೇಶ ಮಾಡಿರುವ ಸ್ಥಾನಪತಿಗಳಿಗೆ ಶೇಕಡ ೯೨ ರಿಂದ ೯೫ ರವರೆಗೆ ಅನಕ್ಷರಜ್ಞರಿರುವ ಕನ್ನಡನಾಡವರಿಗೆ ತಿಳಿವನ್ನು ಯಾವ ಭಾಷೆಯಲ್ಲಿ ಬಿತ್ತಬೇಕು, ಹಾಗೆ ತಿಳಿವು ನೀಡ ಹೋಗುವ ಕಲಿತ ತರುಣರಿಗೆ ಶಿಕ್ಷಣ ಯಾವ ಭಾಷೆಯಲ್ಲಿ ದೊರೆಯಬೇಕೆಂಬುದು ಹೊಳೆಯಲಿಲ್ಲ.

ಮೈಸೂರು ೭೭೪ ಗ್ರಾಜುಯೇಟರನ್ನು ಹೊರಚಲ್ಲಿದೆ. ಅವರಲ್ಲಿ ಸುಮಾರು ೨೦೦ ಜನಕ್ಕೆ ಮೈಸೂರಿನಲ್ಲಿ ಕೆಲಸ ದೊರೆತರೂ ಉಳಿದವರಿಗೆ, ಕನ್ನಡ ಮಾಧ್ಯಮ ತರುವುದರಿಂದ ಕೆಲಸ ಹೊರಗೆ ದೊರೆಯುವುದೂ ಹೋಗುತ್ತದೆ-ಇಂದು ಸ್ಥಾನಪತಿಗಳ ವಾದ.

ಎಷ್ಟು ಜನ ಮೈಸೂರಿನಲ್ಲಿ ಪ್ರತಿವರ್ಷ ಡಿಗ್ರಿ ತೆಗೆದುಕೊಳ್ಳುವ ವಿದ್ಯಾರ್ಥಿಗಳು ಸಾಹಸಜೀವಿಗಳಾಗಿ ಹೊರಗೆ ಕೆಲಸ ದೊರಕಿಸಿಕೊಂಡಿದ್ದಾರೆಂಬ ಅಂಕಿ ಅಂಶಗಳನ್ನು ಸ್ಥಾನಪತಿಗಳು ಸೂಚಿಸಿಲ್ಲ. ಹೊಟ್ಟೆಗೆ ಅನ್ನವನ್ನು ದೊರಕಿಸಿ ಕೊಡದ ಈ ವಿಶ್ವವಿದ್ಯಾನಿಲಯದ ಶಿಕ್ಷಣದಿಂದ ಏನು ಪ್ರಯೋಜನ ಎಂಬುದನ್ನೂ ಸ್ಥಾನಪತಿಗಳು ವಿಮರ್ಶಿಸಿಲ್ಲ. ಶಿಕ್ಷಣದ ಉದ್ದೇಶ ಆತ್ಮಜ್ಞಾನ ಎಂದು ಹೇಳಿದ ಮಾತಿಗೂ ಕನ್ನಡ ಮಾಧ್ಯಮ ಬಂದರೆ ಸುಮಾರು ೫೦೦ ಜನ ಗ್ರಾಜುಯೇಟರು ನಿರುದ್ಯೋಗಿಗಳಾಗಿರುತ್ತಾರೆ ಎಂಬ ಮಾತಿಗೂ ಯಾವ ತಾಳಮೇಳ ?

ಕನ್ನಡ ಮಾಧ್ಯಮ ಬಂದರೆ ಇಂಗ್ಲಿಷ್ ನಿರ್ನಾಮವಾಗಿ ಹೋಗುತ್ತದೆ—ಇಂಗ್ಲಿಷಿಲ್ಲದಿದ್ದರೆ ಮೈಸೂರಿನ ಹೊರಗೆ ವಿದ್ಯಾರ್ಥಿಗಳು ಹೋಗಲಾಗುವುದಿಲ್ಲ ಎಂಬ ವಾದಸರಣಿಯನ್ನು ರಾಜಧರ್ಮಪ್ರಸಕ್ತರು ಹಿಡಿದಿದ್ದಾರೆ.

ಕನ್ನಡ ಮಾಧ್ಯಮದಲ್ಲಿ ತೇರ್ಗಡೆಹೊಂದಿದ ವಿದ್ಯಾರ್ಥಿಗಳ ಇಂಗ್ಲಿಷ್ ಮಟ್ಟ ಇಂಗ್ಲಿಷ್ ಮಾಧ್ಯಮದಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳದ್ದಕ್ಕಿಂತಲೂ ಉತ್ತಮವಾದುದೆಂದು ಶಿಕ್ಷಣ ಶಾಸ್ತ್ರಜ್ಞರು ಅಂಕಿ ಅಂಶಗಳಿಂದ ತೋರಿಸಿಕೊಟ್ಟಿದ್ದಾರೆ. ಶಿಕ್ಷಣ ಮಾಧ್ಯಮ ಕನ್ನಡವಾಗಬೇಕೆಂದು ಬಯಸುವವರು ಇಂಗ್ಲಿಷನ್ನು ತೊಡೆದುಹಾಕಬೇಕೆಂದು ಎಲ್ಲಿಯೂ ಸೂಚಿಸಿಲ್ಲ. ಇಂಗ್ಲಿಷಿಗಿರುವ ಸರ್ವಮಾನ್ಯ ಹೋಗಿ ಅದು ತನ್ನ ಸ್ಥಾನದಲ್ಲಿ ನಿಲ್ಲಬೇಕು, ದೇಶಭಾಷೆ ಪ್ರಧಾನ ಸ್ಥಾನವನ್ನಡರಬೇಕು ಎಂಬ ತತ್ತ್ವ ಶಿಕ್ಷಣಶಾಸ್ತ್ರದಲ್ಲಿ ಅರಿತು ನುರಿತವರೆಲ್ಲರಿಗೂ ಮಾನ್ಯವಾಗಿದೆ. ನಮ್ಮ ರಾಜಕೀಯ ದಾಸ್ಯವನ್ನು ತೊಡೆದು ಹಾಕಲು ಶಿಕ್ಷಣಕ್ಕೆ ದೇಶಭಾಷೆಯನ್ನೇ ಮಾಧ್ಯಮವಾಗಿ ತರುವುದು ಅತ್ಯಗತ್ಯ. ಹೊರಗಿನ ಸಂಪರ್ಕಕ್ಕಾಗಿ, ವಿಜ್ಞಾನಾದಿ ವಿಷಯಗಳ ನೂತನ ಸಂಶೋಧನೆಗಳ ಪರಿಚಯಕ್ಕಾಗಿ

ಇಂಗ್ಲಿಷು ದ್ವಿತೀಯ ಭಾಷೆಯಾಗಿದ್ದರೆ ಸಾಕು. ಈ ನೀತಿಯನ್ನು ಅನು ಸರಿಸುವ ಉಸ್ಮಾನಿಯಾ ವಿಶ್ವವಿದ್ಯಾನಿಲಯು ಗುಣ ಗೌರವಗಳಲ್ಲಿ ಕಡಿಮೆ ಯಾಗಿಲ್ಲ. ಶಿಕ್ಷಣ ಮಾಧ್ಯಮ ಪ್ರಯೋಗ ಹೈದರಾಬಾದಿನಲ್ಲಿ ಯಶಸ್ವಿ ಯಾದಂತೆ ಮೈಸೂರಿನಲ್ಲಿಯೂ ಆಗುತ್ತದೆ. ಆದರೆ ಮೈಸೂರಿಗೆ ದೇಶ ಭಾಷಾಪ್ರಿಯರಾದ ಸ್ಥಾನಪತಿಗಳಿರಬೇಕಷ್ಟೆ. ಇಂಗ್ಲಿಷ್ ಮಾಧ್ಯಮ ನ್ನರಿಯದ ನೂರಾರು ಹೈದರಾಬಾದು ವಿದ್ಯಾರ್ಥಿಗಳು ವಿಲಾಯಿತಿ ಕಾಲ ಕ್ಷೇಪಗಳನ್ನು ತೆಗೆದುಕೊಂಡು ಹೊರಗೆ ಹೋಗಿದ್ದಾರೆ. ಹೈದರಾಬಾದಿನಲ್ಲಿ ಉರ್ದು ಮಾಧ್ಯಮದಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಹೈದರಾಬಾದಿನ ಹೊರಗೂ ಕೆಲಸಗಳು ದೊರೆಯುತ್ತಿವೆ. ಹೊರಗೆ ಕೆಲಸಗಳನ್ನು ದೊರಕಿಸಿ ಕೊಳ್ಳುವುದಕ್ಕೆ ಶಿಕ್ಷಣ ಮಾಧ್ಯಮ ಅಡ್ಡಿ ಬರುವುದಿಲ್ಲವೆಂಬುದು ನಾವು ಚೆನ್ನಾಗಿ ಬಲ್ಲ ಸತ್ಯ.

ಇನ್ನು ವಿದ್ಯಾರ್ಥಿಗಳ ಬಗ್ಗೆ ಸ್ಥಾನಪತಿಗಳ ಧೋರಣೆಯನ್ನು ಗಮನಿ ಸೋಣ. ವಿದ್ಯಾರ್ಥಿಗಳು ವಿಶ್ವವಿದ್ಯಾನಿಲಯದ ಸಿಸ್ತಿಗೆ ಒಳಪಡದೆ ಇರು ವುದರಿಂದ ಅವರ ಅಪರಾಧಗಳಿಗೆ, ಅವರ ಮಾತಾಪಿತೃಗಳನ್ನು ಶಿಕ್ಷಿಸ ಲಾಗುವುದು ಎಂದು ಘೋಷಿಸುತ್ತಾರೆ ರಾಜಧರ್ಮಪ್ರಸಕ್ತರು. ಯಾರ ತಪ್ಪಿಗೆ ಯಾರಿಗೋ ಶಿಕ್ಷೆ. ವಿದ್ಯಾರ್ಥಿಗಳಲ್ಲಾಗಿರುವ ಜಾಗೃತಿ, ಸ್ವಾತಂ ತ್ರೇಚ್ಛೆ ಸ್ಥಾನಪತಿಗಳಿಗೆ ತಿಳಿಯದು. ಮನೆಯ ಹಿರಿಯರಿಗೆ ಬೆದರಿಕೆ ಹಾಕಿ ವಿದ್ಯಾರ್ಥಿಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಸ್ಥಾನಪತಿಗಳು ಹವಣಿಸುತ್ತಿದ್ದಾರೆ.

ಈ ಮಾತುಗಳನ್ನು ಕೇಳಿಕೊಂಡೂ ನಮ್ಮ ವಿದ್ಯಾರ್ಥಿಗಳು ತೆಪ್ಪಗಿರು ವುದು ವಿಷಾದಕರವಾಗಿದೆ. ಕಲ್ಕತ್ತ, ಮುಂಬಯಿ ವಿಶ್ವವಿದ್ಯಾನಿಲಯಗಳ ಸ್ಥಾನಪತಿಗಳಿಂದ ಈ ಮಾತು ಬಂದಿದ್ದರೆ ಅಲ್ಲಿನ ವಿದ್ಯಾರ್ಥಿಗಳು ಭಯಂಕರ ಚಳುವಳಿ ಹೂಡಿ ಸ್ಥಾನಪತಿಗಳನ್ನು ಮನೆಗೆ ಕಳುಹಿಸುತ್ತಿದ್ದರು. ವಿದ್ಯಾರ್ಥಿ ಕಾಂಗ್ರೆಸ್, ಫೆಡರೇಷನ್ ಎಂದು ಹೋರಾಡುವ ವಿದ್ಯಾರ್ಥಿಗಳಿಗೆ ತಮ್ಮ ಹಿತಾಹಿತಗಳ ಕಲ್ಪನೆಯೇ ಇಲ್ಲ. ಮೊನ್ನೆ ಮೊನ್ನೆ ನಡೆದ 'ವಂದೇ ಮಾತರಂ' ಪ್ರಕರಣದಲ್ಲಿ ಮೈಸೂರು ಕಾಲೇಜಿನ ವಿದ್ಯಾರ್ಥಿಗಳು ತೋರಿದ ದೌರ್ಬಲ್ಯವೇ ಇದಕ್ಕೆ ಸಾಕ್ಷಿ.

ವಿದ್ಯಾರ್ಥಿಗಳಿಗೆ ನಮ್ಮ ಮಾತಿದು. ಅವರು ಸಂಘಟಿತವಾಗಿ ಪ್ರಚಂಡ ಚಳವಳಿಯನ್ನು ಹೂಡಬೇಕು ತಮಗಾಗಿ—ಕನ್ನಡಕ್ಕಾಗಿ.

೧) ಅಚ್ಚಕನ್ನಡಿಗರೂ, ಕನ್ನಡಾಭಿಮಾನಿಗಳೂ ಆದವರೇ ಸ್ಥಾನ ಪತಿಗಳಾಗಬೇಕು.

೨) ಕನ್ನಡ ಮಾಧ್ಯಮವನ್ನು ವಿಶ್ವವಿದ್ಯಾನಿಲಯದಲ್ಲಿ ಕೂಡಲೆ ಆಚರಣೆಗೆ ತರಬೇಕು. ಅಲ್ಲಿಯುವರೆಗೆ ತಾವು ಕಾಲೇಜಿಗೆ ಹೋಗುವುದಿಲ್ಲ ವೆಂದು ವಿದ್ಯಾರ್ಥಿಗಳು ಮುಷ್ಕರ ಹೂಡಬೇಕು.

೩. ಘಟಿಕೋತ್ಸವದ ಉಪದೇಶ ಭಾಷಣ ಕನ್ನಡಿಗರಿಂದ, ಕನ್ನಡ ದಲ್ಲಿಯೇ ಆಗಬೇಕು.

೪) ವಿದ್ಯಾರ್ಥಿಗಳ ಚಟುವಟಿಕೆಗಳಿಗೆ ಅವರ ತಂದೆತಾಯಿಗಳನ್ನು ಶಿಕ್ಷಿಸುವ ಕ್ರಮ ಕೂಡಲೆ ರದ್ದಾಗಬೇಕು.

ಮೈಸೂರಿನ ವಿದ್ಯಾರ್ಥಿಗಳಲ್ಲಿ ಜಾಗೃತಿಯಾಗಿದ್ದರೆ, ಅವರು ಸ್ವಾಭಿ ಮಾನಧನರಾಗಿದ್ದರೆ ಮೇಲೆ ನಾವು ಸೂಚಿಸಿರುವ ವಿಧಾಯಕ ಕಾರ್ಯಕ್ರಮ ವನ್ನು ಕೈಗೊಳ್ಳಲಿ.

ಜೈ ಹಿಂದ್ ! ಜೈ ಕರ್ನಾಟಕ !!



# ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

---

## ನಮ್ಮ ಪ್ರಕಟನೆಗಳು

| | | | | |
|---|---|---|---|---|
| ಮ್ಯಾಕ್ಸಿಂ ಗಾರ್ಕಿ | ಸಂ:—ಅ. ನ. ಕೃಷ್ಣರಾಯ | ೫ | ೮ | ೦ |
| ತಲೆಹರಟೆ | ನಾಡಿಗೇರ ಕೃಷ್ಣರಾಯ | ೧ | ೪ | ೦ |
| ಬಸವಣ್ಣನವರ ಅಮೃತವಾಣಿ | ಅ. ನ. ಕೃಷ್ಣರಾಯ | ೨ | ೪ | ೦ |
| ಪಾಪ–ಪುಣ್ಯ | ,, | ೧ | ೪ | ೦ |
| ಪ್ರಗತಿಶೀಲ ಸಾಹಿತ್ಯ | ಸಂ:— ,, | ೨ | ೦ | ೦ |
| ನನ್ನನ್ನು ನಾನೇ ಕಂಡೆ | ,, | ೧ | ೦ | ೦ |
| ಸಾಹಿತ್ಯ ಮತ್ತು ಜೀವನ | ,, | ೧ | ೮ | ೦ |
| ಎರಡು ನಾಟಕಗಳು | ,, | ೧ | ೧೨ | ೦ |
| ಸಂಧ್ಯಾರಾಗ | (ತೃತೀಯ ಮುದ್ರಣ) | ೨ | ೦ | ೦ |
| ಅಶಾಂತಿಪರ್ವ | ಆನಂದಕಂದ (ದ್ವಿತೀಯ ಮುದ್ರಣ) | ೨ | ೪ | ೦ |
| ಲೀಲಾವತಿ ಪ್ರಬಂಧ | ಪ್ರೊ. ಕೆ. ಜಿ. ಕುಂದಣಗಾರ | ೦ | ೧೨ | ೦ |
| ನನ್ನ ನಲ್ಲ | ಮಧುರ ಚೆನ್ನ | ೦ | ೧೦ | ೦ |
| ಕರ್ನಾಟಕ ಗತವೈಭವ | ಆಲೂರ ವೆಂಕಟರಾಯರು | ೧ | ೧೨ | ೦ |
| ಕರ್ನಾಟಕ ವೀರರತ್ನಗಳು | ,, | ೧ | ೮ | ೦ |
| ಕಾಮನಬಿಲ್ಲು ಭಾಗ ೨ | ಸಂ:—ಅ. ನ. ಕೃಷ್ಣರಾಯ | ೨ | ೪ | ೦ |
| ಕಣ್ಣುಮುಚ್ಚಾಲೆ | ,, | ೧ | ೪ | ೦ |
| ಜೀವನ ಸಂಗ್ರಾಮ | ಅರ್ಚಿಕ ವೆಂಕಟೇಶ | ೧ | ೨ | ೦ |
| ರಸಋಷಿ | ಸಂ:—ಅ. ನ. ಕೃಷ್ಣರಾಯ | ೧ | ೮ | ೦ |

## ಅ. ನ. ಕೃಷ್ಣರಾಯರ (ದೊರೆಯುವ) ಇತರ ಪುಸ್ತಕಗಳು

| | | | |
|---|---|---|---|
| ಸಾಹಿತ್ಯರತ್ನ | ೩ | ೮ | ೦ |
| ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ | ೨ | ೦ | ೦ |
| ಉದಯರಾಗ (ದ್ವಿತೀಯ ಮುದ್ರಣ) | ೧ | ೮ | ೦ |
| ರಾಜಾ ರವಿವರ್ಮ (ಸಚಿತ್ರ) | ೨ | ೦ | ೦ |
| ಹೊಸ ಹುಟ್ಟು | ೧ | ೦ | ೦ |
| ಆಹುತಿ | ೧ | ೦ | ೦ |
| ಸ್ವಾಮಿ ವಿವೇಕಾನಂದ | ೧ | ೪ | ೦ |
| ಮರುಳುಸಿದ್ಧ ಕಾವ್ಯ | ೩ | ೦ | ೦ |
| ಮಂಗಳಸೂತ್ರ (ದ್ವಿತೀಯ ಮುದ್ರಣ) | ೨ | ೪ | ೦ |

## ನಮ್ಮ ಏಜನ್ಸಿಯ ಇತರ ಪ್ರಕಟನೆಗಳು

| | | | | |
|---|---|---|---|---|
| ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿ : | ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ | ೧ | ೪ | ೦ |
| ಸಂಧ್ಯಾಕಾಲ | ಶ್ರೀರಂಗ | ೧ | ೦ | ೦ |
| ಕುಂತಳೇಶ್ವರ | ಪಾಂ. ಭೀ. ದೇಸಾಯಿ | ೧ | ೦ | ೦ |
| ರತ್ನಸಿಂಹಾಸನ | ಮಾ. ನ. ಮೂರ್ತಿ | ೦ | ೧೨ | ೦ |
| ರಷ್ಯದ ಮುನ್ನಡೆ | ಕುಮಾರ ವೆಂಕಣ್ಣ | ೦ | ೬ | ೦ |
| ಶಿವನ ಸೋಲು | ಅಮರವಾಣಿ | ೦ | ೧೨ | ೦ |
| ಸ್ವಾಮಿ ರಾಮತೀರ್ಥರು | ಓ. ಎಲ್. ಲಿಂಗಣ್ಣಯ್ಯ | ೦ | ೧೪ | ೦ |
| ಜಂಗಮ ವಿಜಯ | ತ್ರಿವೈಲಂ | ೦ | ೧೦ | ೦ |
| ಆತ್ಮಾರ್ಪಣ | ಶಾನ್ಯಾನಂದ | ೦ | ೬ | ೦ |
| ಭಾರತಶಕ್ತಿ | ಕುಮಾರ ವೆಂಕಣ್ಣ | ೦ | ೩ | ೦ |
| ಅಖಂಡೇಶ್ವರ ವಚನ : | ಶಿವವೀರದೇವರು | ೨ | ೦ | ೦ |
| ಕೈವಲ್ಯ ದರ್ಪಣ | ಪ್ರೊ. ಬಸವನಾಳ | ೧ | ೪ | ೦ |
| ಆಧುನಿಕ ಚೀನಾ | ಎಸ್. ಅನಂತನಾರಾಯಣ | ೧ | ೦ | ೦ |
| ಬ್ಯಾಂಕುಗಳೂ ಅವುಗಳ ವ್ಯವಹಾರಗಳು | ಅಷ್ಟಣಿಗಿ | ೧ | ೦ | ೦ |